

## ಮೈಸೂರು ವಿಶ್ವವಿದ್ಯಾನಿಲಯ

ಪ್ರಾಚ್ಯವಿದ್ಯಾಸಂಶೋಧನಾಲಯ ಗ್ರಂಥಮಾಲಾ – 222

ಕವಿಜನ ಕಾಮಧೇನು

# ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರು



ಡಾ. ಎಸ್. ಶಿವರಾಜಪ್ಪ



ಪ್ರಾಚ್ಯವಿದ್ಯಾಸಂಶೋಧನಾಲಯ
ಮೈಸೂರು, ೨೦೨೦

"ಕವಿಜನ ಕಾಮಧೇನು"

# ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರು

ಡಾ. ಎಸ್. ಶಿವರಾಜಪ್ಪ
ನಿರ್ದೇಶಕರು
ಪ್ರಾಚ್ಯ ವಿದ್ಯಾಸಂಶೋಧನಾಲಯ
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು - ೫೭೦ ೦೦೫

ಪ್ರಕಾಶಕರು
ಪ್ರಾಚ್ಯ ವಿದ್ಯಾ ಸಂಶೋಧನಾಲಯ
ಮೈಸೂರು ವಿಶ್ವವಿದ್ಯಾನಿಲಯ
ಮಾನಸಗಂಗೋತ್ರಿ, ಮೈಸೂರು
೨೦೨೦

*KAVIJAN KAMADHENU SRI MUMMADI KRISHNA ODEYARU* : :
Written by Dr. S. Shivrajappa, published by Oriental Research Institute, University of Mysore, Mysuru-5; Pp. 112

ಪ್ರಕಾಶಕರು :

**ಡಾ ಎಸ್ ಶಿವರಾಜಪ್ಪ**

ನಿರ್ದೇಶಕರು

ಪ್ರಾಚ್ಯವಿದ್ಯಾ ಸಂಶೋಧನಾಲಯ

ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು–570 005

ಪುಟ : 112

ಪ್ರಥಮ ಮುದ್ರಣ : 2020

ಬೆಲೆ : ರೂ. 150.00

ಹಕ್ಕುಗಳು : ಲೇಖಕರದು

ISBN No. : 978-81-947982-2-0

ಮುಖಪುಟ ವಿನ್ಯಾಸ : ಮೀನಾವತಿ
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ

ಅಕ್ಷರ ವಿನ್ಯಾಸ :
ಬಿ.ಎಂ. ಮಂಜುಳಮುರಳಿ
ಮೊ. ನಂ. : 9916710872

ಮಾರಾಟ
**ಪ್ರೊ. ಎನ್ ಎಂ ತಳವಾರ್**
ನಿರ್ದೇಶಕರು
ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಮುದ್ರಕರು
**ಶ್ರೀ ಸತೀಶ್ ಎಸ್**
ನಿರ್ದೇಶಕರು
ವಿಶ್ವವಿದ್ಯಾನಿಲಯ ಮುದ್ರಣಾಲಯ, ಮಾನಸಗಂಗೋತ್ರಿ
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು – 570 005

# ಕುಲಪತಿಗಳ ನುಡಿ

ಮೈಸೂರು ಮಹಾಸಂಸ್ಥಾನದ ಸಾಹಿತ್ಯಿಕ, ಸಾಂಸ್ಕೃತಿಕ ಇತಿಹಾಸಕಾರರೆಂದರೆ ಶ್ರೀಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು. ಕನ್ನಡ ನಾಡಿನ ರಾಜಕೀಯ ಹಾಗೂ ಸಾಂಸ್ಕೃತಿಕ ಮಹಾಮೇರು, "ಕನ್ನಡದ ಭೋಜ", ಕವಿಜನಕಾಮಧೇನು ಎಂಬ ಬಿರುದಾಂಕಿತ ಶ್ರೀಮುಮ್ಮಡಿಯವರು ಕೊಡುಗೈ ದಾನಿಯೂ ಹೌದು. ಉತ್ತಮ ಆಡಳಿತಗಾರರೂ ಹೌದು. ಧಾರಾನಗರದ ಭೋಜರಾಜನಂತೆ ಸಾಹಿತ್ಯ ಸಂಸ್ಕೃತಿಯ ಹರಿಕಾರರು. ಮೈಸೂರು ಮಹಾಸಂಸ್ಥಾನವನ್ನು ಆಳಿದ ಯದುವಂಶದ ಒಡೆಯರ್ ಮನೆತನದ ಅರಸರುಗಳ ಪರಂಪರೆಯಲ್ಲಿ ಇವರು ಇಪ್ಪತ್ತೆರಡನೆಯವರು.

ಶ್ರೀಮುಮ್ಮಡಿಯವರು 1794 ರಲ್ಲಿ ಜನಿಸಿ, ಎಪ್ಪತ್ತಾನಾಲ್ಕು ವರ್ಷಗಳ ಸಾರ್ಥಕ ಬದುಕು ನಡೆಸಿ, 1868 ನೆಯ ಮಾರ್ಚ್ 23 ರಂದು ಕಾಲವಶರಾದರು. ಜನನ ಮರಣದ ನಡುವೆ ಹೋರಾಟ, ತ್ಯಾಗ, ಶ್ರಮ, ದೂರದೃಷ್ಟಿಯನ್ನೇ ತಮ್ಮ ಜೀವನದ ಅಂಗವನ್ನಾಗಿ ಮಾಡಿಕೊಂಡು, ಯಶಸ್ಸನ್ನು ಕಂಡುಕೊಂಡವರು ಇವರು. ಮಹಾಸಂಸ್ಥಾನದ ಅಧಿಕಾರವಹಿಸಿಕೊಂಡಾಗ ಇವರಿಗೆ ಹದಿನೇಳು ವರ್ಷದ ಹರೆಯ. ಆದರೂ ಸಿಂಹಾಸನವು ಮುಮ್ಮಡಿಯವರಿಗೆ ಹೂವಿನ ಹಾಸಿಗೆಯಾಗಿರಲಿಲ್ಲ. ಇವರ ಆಡಳಿತಾವಧಿಯಲ್ಲಿ ಕ್ಷಾಮಡಾಮಗಳು, ಸೈನ್ಯದ ವೆಚ್ಚ ಇವೇ ಮುಂತಾದ ಹತ್ತು ಹಲವಾರು ಸಮಸ್ಯೆಗಳು ತಲೆದೋರಿದವು. ಆಗ ರಾಜ್ಯದ ಆರ್ಥಿಕ ಸ್ಥಿತಿ ಹದಗೆಟ್ಟಿತ್ತು. ಇವೆಲ್ಲವನ್ನು ಬಹು ಜಾಣ್ಮೆಯಿಂದ ಎದುರಿಸಿ ನಿಂತ ಮಹಾವಿವೇಚನಾಶೀಲರು.

ಶ್ರೀಮುಮ್ಮಡಿಯವರು ಬಹುಭಾಷಾ ಪಂಡಿತರೂ, ರಸತಜ್ಞರೂ ಆಗಿದ್ದರು. ಇವರಿಗೆ ಸಂಸ್ಕೃತ, ಕನ್ನಡ, ಮರಾಠಿ, ಪರ್ಷಿಯನ್ ಭಾಷೆಗಳಲ್ಲಿ ಬಹಳ ಪ್ರಭುತ್ವವಿತ್ತು.

ಜತೆಗೆ ದೈವ ಭಕ್ತರಾಗಿದ್ದು, ಮಠ ಮಂದಿರ, ದೇವಸ್ಥಾನಗಳಿಗೆ ಉದಾರವಾಗಿ ದಾನಗೈದಿದ್ದಾರೆ. ಅನೇಕ ಅಗ್ರಹಾರಗಳನ್ನು ನಿರ್ಮಿಸಿ, ಕಾವ್ಯ, ಸಂಗೀತ, ಶಿಲ್ಪಕಲೆ ಮುಂತಾದ ನೂರಾರು ಕಲೆಗಳಲ್ಲಿ ಸ್ವತಃ ಪಾರಂಗತರಾಗುವುದರ ಜೊತೆಗೆ ಉಳಿದವರಿಗೂ ಪ್ರೋತ್ಸಾಹ ನೀಡಿದ್ದಾರೆ.

ಶ್ರೀಮುಮ್ಮಡಿಯವರ ಹೆಸರು ಅಮರವಾಗಿ ಉಳಿದಿರುವುದು, ಅವರ ಸಾಹಿತ್ಯ ಕೃತಿಗಳಿಂದ 58 ಕ್ಕಿಂತಲೂ ಹೆಚ್ಚಿನ ಅಪರೂಪದ ಗ್ರಂಥಗಳನ್ನು ರಚಿಸಿ, ಸಾಹಿತ್ಯ ಲೋಕದಲ್ಲಿ ಚಿರಸ್ಥಾಯಿಯಾಗಿ ಉಳಿದಿದ್ದಾರೆ . ಮುಮ್ಮಡಿಯವರ ಗ್ರಂಥಗಳು ಸಂಸ್ಕೃತ'ಮತ್ತು ಕನ್ನಡಕ್ಕೆ ಹೊಸತನದ ಗತ್ತುಗಮ್ಮತ್ತುಗಳನ್ನು ತಂದುಕೊಟ್ಟಿವೆ. ಆಧುನಿಕ ಗದ್ಯಕ್ಕೆ ನಾಂದಿ ಹಾಡಿವೆ. ಮುಮ್ಮಡಿಯವರ ಸಾಹಿತ್ಯ ಕೃತಿಗಳಲ್ಲಿ ವಿಪುಲವಾದ ವೈವಿಧ್ಯವಿದೆ. ಕಾಳಿದಾಸ, ಶ್ರೀಹರ್ಷ ಮುಂತಾದವರ ಕೃತಿಗಳನ್ನು ಆಧರಿಸಿದ ಬರಹಗಳಿವೆ. 'ಶ್ರೀ ತತ್ತ್ವನಿಧಿ' ಇವರಿಂದ ರಚಿತವಾದ ಒಂದು ವಿಶಿಷ್ಟ ಗ್ರಂಥ. ಶಕ್ತಿನಿಧಿ, ವಿಷ್ಣುನಿಧಿ, ಶಿವನಿಧಿ, ಬ್ರಹ್ಮನಿಧಿ, ಗ್ರಹನಿಧಿ, ವೈಷ್ಣವನಿಧಿ, ಶೈವನಿಧಿ, ಆಗಮನಿಧಿ ಮತ್ತು ಕೌತುಕನಿಧಿ ಎಂಬ ಒಂಭತ್ತು ನಿಧಿಗಳಿವೆ. ಇವುಗಳಲ್ಲಿ ಉಲ್ಲೇಖಿಗೊಂಡಿರುವ ವಿಷಯಗಳಿಗೆ ಅನುಗುಣವಾಗಿ 4,000 ವರ್ಣರಂಜಿತ ಚಿತ್ರಗಳನ್ನು ಬರೆಯಿಸಲಾಗಿದೆ.

ಈ ನವ ನಿಧಿಗಳು ಭಾರತೀಯ ಸಾಹಿತ್ಯ ಸಂಸ್ಕೃತಿಯನ್ನು ಎತ್ತಿಹಿಡಿದಿವೆ. ಬತ್ತೀಸ ಪುತ್ತಳಿ, ಶುಕ, ಸಪ್ತತಿ ಮುಂತಾದ ಜಾನಪದ ಸಾಂಪ್ರದಾಯದ ರಚನೆಗಳಿವೆ. ಪುರಾಣ ಇತಿಹಾಸಗಳ ಗಣಿಯಿದೆ. ರಾಜಕೀಯ ಜೀವನದ ಹಲವಾರು ಸಮಸ್ಯೆಗಳಿಂದ ಮನನೊಂದಿದ್ದ, ಇವರು ಮನಸ್ಸಿಗೆ ಶಾಂತಿ ಮತ್ತು ಸಹನೆಯನ್ನು ತಂದುಕೊಳ್ಳಲು, ನವನವೀನ ಸಾಹಿತ್ಯ ಕೃಷಿಯ ಕಡೆಗೆ ಮೊರೆ ಹೋಗಿದ್ದಾರೆ. ಪ್ರಜಾವತ್ಸಲತೆ ಕಲಾಭಿಜ್ಞತೆ, ಔದಾರ್ಯ ಮುಂತಾದ ಆದರಣೀಯ ಗುಣಗಳಿಂದ ಶ್ರೀಮುಮ್ಮಡಿಯವರು ಕನ್ನಡ ಜನತಾ ಜನಾರ್ದನನ ಹೃದಯ ಸಿಂಹಾಸನದಲ್ಲಿ ಚಿರಸ್ಥಾಯಿಯಾಗಿ ಉಳಿದುಕೊಂಡಿದ್ದಾರೆ. ಇಂತಹ ಮಹಾ ಮೇರು ಸದೃಶ ವ್ಯಕ್ತಿಯ ಬದುಕು-ಬರಹಗಳನ್ನು ಒಳಗೊಂಡಂತಹ ಕೃತಿಯು ಲೋಕಾರ್ಪಣೆಗೊಳ್ಳುತ್ತಿರುವುದು ಅತೀವ ಸಂತೋಷವನ್ನುಂಟುಮಾಡಿದೆ.

ಪ್ರಾಚ್ಯವಿದ್ಯಾ ಸಂಶೋಧನಾಲಯದ ನಿರ್ದೇಶಕರಾಗಿ ಡಾ. ಎಸ್. ಶಿವರಾಜಪ್ಪರವರು ಅಧಿಕಾರ ವಹಿಸಿಕೊಂಡು, ಹಲವಾರು ಕ್ರಿಯಾ ಯೋಜನೆಗಳನ್ನು ರೂಪಿಸಿಕೊಂಡು, ಪ್ರಸ್ತುತ ವಿವಿಧ ಶೀರ್ಷಿಕೆಗಳುಳ್ಳ ಅಪರೂಪದ ಹೊಸ ಗ್ರಂಥಗಳನ್ನು ಪ್ರಕಟಿಸುವ ಕೆಲಸವನ್ನು ಹಮ್ಮಿಕೊಂಡಿರುವುದು ತುಂಬಾ ಸಂತೋಷದ

ಸಂಗತಿಯಾಗಿದೆ. ಇಂತಹ ಕ್ರಿಯಾಶೀಲ ಕೆಲಸಗಳು ನಿರಂತರವಾಗಿ ಸಾಗುತ್ತಾ, ವಿಶ್ವವಿದ್ಯಾನಿಲಯಕ್ಕೆ ಕೀರ್ತಿ ತರುವಂತಾಗಲಿ ಎಂದು ಆಶಿಸುತ್ತೇನೆ.

ಪ್ರಾಚ್ಯವಿದ್ಯಾ ಸಂಶೋಧನಾಲಯದ ನಿರ್ದೇಶಕರಾದ ಡಾ. ಎಸ್. ಶಿವರಾಜಪ್ಪ ಇವರಿಂದ ರಚಿತವಾಗಿರುವ **"ಕವಿಜನ ಕಾಮಧೇನು ಶ್ರೀಮುಮ್ಮಡಿ ಕೃಷ್ಣರಾಜ ಒಡೆಯರ್"** ಎಂಬ ಈ ಕೃತಿ ಶ್ರೀಮುಮ್ಮಡಿಯವರ ಜೀವನ ಸಾಧನೆಯನ್ನು ಅನಾವರಣಗೊಳಿಸುವ ಕೃತಿಯಾಗಿದೆ. ಈ ಕೃತಿಯು ಪ್ರಾಚ್ಯವಿದ್ಯಾ ಸಂಶೋಧನಾಲಯದ ಗ್ರಂಥಮಾಲೆಯ 222ನೆಯ ಕೃತಿಯಾಗಿ ಪ್ರಕಟವಾಗುತ್ತಿರುವುದು ಹೆಮ್ಮೆಯ ಸಂಗತಿಯಾಗಿದೆ.

ಈ ಗ್ರಂಥದ ರಚನಕಾರರೂ ಹಾಗೂ ಪ್ರಾಚ್ಯವಿದ್ಯಾ ಸಂಶೋಧನಾಲಯದ ನಿರ್ದೇಶಕರಾದ ಡಾ. ಎಸ್. ಶಿವರಾಜಪ್ಪ ಅವರನ್ನು ಅಭಿನಂದಿಸುತ್ತೇನೆ. ಪುಸ್ತಕದ ಮಾರಾಟ ಮತ್ತು ಪ್ರಕಟಣೆಯ ಜವಾಬ್ದಾರಿಯನ್ನು ನಿರ್ವಹಿಸುತ್ತಿರುವ ಪ್ರಸಾರಾಂಗದ ನಿರ್ದೇಶಕರಾದ ಪ್ರೊ. ಎಸ್.ಎಂ. ತಳವಾರ್ ಅವರಿಗೆ ಹಾಗೂ ಮುದ್ರಣಾಲಯದ ನಿರ್ದೇಶಕರಾದ ಶ್ರೀ ಎಸ್. ಸತೀಶ್ ಅವರನ್ನೂ ಅಭಿನಂದಿಸುತ್ತೇನೆ.

**ಪ್ರೊ. ಜಿ. ಹೇಮಂತ ಕುಮಾರ್**
ಕುಲಪತಿಗಳು
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು

# ಮುನ್ನುಡಿ

ಮೈಸೂರು ರಾಜ್ಯವೂ ನಗರವೂ 10ನೆಯ ಶತಕದ ಪ್ರಾರಂಭದಿಂದಲೇ ಇತಿಹಾಸದಲ್ಲಿ ಕಂಡು ಬಂದರೂ, ಅದು ಒಡೆಯರ ಕಾಲದ ರಾಜ್ಯ ರಾಜಧಾನಿಗಳಾಗಿ ಪ್ರಶಸ್ತಿಗೆ ಪಾತ್ರವಾದದ್ದು. ಅನಂತರದ ಕಾಲದಲ್ಲಿ ಮಹಾಮಹೋಪಾಧ್ಯಾಯರು, ಪಂಡಿತೋತ್ತಮರು 'ಮಹೀಶೂರಪುರ'ವೂ ಜಗತ್ ಪ್ರಸಿದ್ಧ ವೀರಶೂರರ ಪಟ್ಟಣವಾಗಿ ಮೈಸೂರು ಮಹಿಷಪುಂಗಳ ಜೊತೆ ಜೊತೆಗೇ ಕಾಣಿಸಿಕೊಂಡು ಬಂದಿರುವುದು ಇತಹಾಸದ ಕ್ರಿಯಾಶೀಲತೆಯನ್ನು ಎತ್ತಿ ತೋರಿಸುತ್ತದೆ.

17ನೆಯ ಶತಮಾನದಲ್ಲಿ ಬರುವ ಕಂಠೀರವ ನರಸರಾಜ ವಿಜಯ, ಚಿಕ್ಕದೇವರಾಯ ವಂಶಾವಳಿ ಮುಂತಾದ ಗ್ರಂಥಗಳು ಹಾಗೂ ಹಾಲಗೆರೆ ತಾಮ್ರ ಪಟಗಳು, ಗಜ್ಜಿಗನಹಳ್ಳಿ ತಾಮ್ರಪಟಗಳು ಇವೇ ಮುಂತಾದ ಶಾಸನ ಲೇಖನಗಳನ್ನು ಕಾಣಬಹುದು.

ಅನಂತರ ಮೈಸೂರು ಅರಸರ ಪೂರ್ವಾಭ್ಯುದಯ ವಿವರ, ಮೈಸೂರು ನಗರದ ಪೂರ್ವೋತ್ತರ ಮತ್ತು ಮೈಸೂರು ದೊರೆಗಳ ವಂಶಾವಳಿ, 18ನೆಯ ಶತಮಾನದಲ್ಲಿ ಮೈಸೂರು ರಾಜರ ಚರಿತ್ರೆ, ಕಳಲೆ ಅರಸರ ವಂಶಾವಳಿ ದೇವಚಂದ್ರನ ರಾಜಾವಳೀ ಕಥಾಸಾರ 1916ರಲ್ಲಿ ರಚನೆಗೊಂಡ ಶ್ರೀಮನ್ಮರಾಜರವರು ಇವೇ ವಂಶಾವಳಿ ಮುಂತಾದ ಚರಿತ್ರಾರ್ಹ ಗ್ರಂಥಗಳು ಮೈಸೂರಿನ ಇತಿಹಾಸವನ್ನು ಸಾರುತ್ತಿವೆ. 1371ನೆಯ ವರ್ಷದಲ್ಲಿ ಬರುವ ಯದುರಾಯ ಎಂಬುವರು ಮೂಲ ಪುರುಷರು. ಇವರು ಕೃಷ್ಣ ಹುಟ್ಟಿದ ಯದುವಂಶದ ಶ್ರುತಸೇನರಾಯನ ಸಂತತಿಯಲ್ಲಿ ಬರುವ ಅರಸರಲ್ಲಿ ಒಬ್ಬನಾದ ರಾಜದೇವನಿಗೆ ಜನಿಸಿದ ಪುತ್ರರಲ್ಲಿ ಮೊದಲಿಗರು. ಇವರ ಸಹೋದರರೇ ಕೃಷ್ಣರಾಯರು.ಯದುರಾಯರು ತಮಗೆ ಸ್ವಪ್ನದಲ್ಲಿ ಶ್ರೀಕೃಷ್ಣನ

ಅಪ್ಪಣೆ ಕೊಟ್ಟ ಪ್ರಕಾರದಲ್ಲಿ ತಾವಿದ್ದ ದ್ವಾರಕಾನಗರವನ್ನು ಬಿಟ್ಟು ಇಂದ್ಯ ಪರ್ವತವಾಸನಿಯನ್ನು ಕುರಿತು ತಪಸ್ಸು ಮಾಡಿದರು. ಆ ಸಂದರ್ಭದಲ್ಲಿ ವಿಂಧ್ಯವಾಗಿಸಿ ಪ್ರಸನ್ನಳಾಗಿ, ಕಾವೇರೀ ಕಪಿಲಾ ಮಧ್ಯದಲ್ಲಿರುವ ಮಹಾಬಲ ಪರ್ವತದಲ್ಲಿ ಚಾಮುಂಡೇಶ್ವರಿ ಎಂಬ ನಾಮಾಂಕಿತವ ಪಡೆದು ವಿರಾಜಮಾನಳಾಗಿದ್ದಾಳೆ. ಆ ಮಹಾಬಲ ಪರ್ವತಕ್ಕೆ ನೀನು ಹೋಗಿ ಅವಳನ್ನು ಪೂಜಿಸಿದರೆ ನಿನಗೆ ಪರ್ವತದ ಸಮೀಪದಲ್ಲಿರುವ ಮೈಸೂರೆಂಬ ಪಟ್ಟಣದ ದೊರೆಯ ಮಗಳು ಮದುವೆಯಾಗಿ ಆ ಪಟ್ಟಣವು ನಿನ್ನ ಕೈವಶವಾಗುವುದು ಎಂದು ಅಭಯವನಿತ್ತಳು.

ಆಗ ಯದುರಾಯರು ಸಂತೋಷಗೊಂಡು ಆ ವಿಂಧ್ಯಪರ್ವತದಿಂದ ಹೊರಟು ವಿಜಯನಗರದ ಮಾರ್ಗವಾಗಿ ಮೊದಲು ಯಾದವಗಿರಿಗೆ ಬರುತ್ತಾರೆ. ಅಲ್ಲಿನ ಕಲ್ಯಾಣಿ ಎಂಬ ತೀರ್ಥದಲ್ಲಿ ಸ್ನಾನ ಮಾಡಿ ಅಲ್ಲಿಯ ಯೋಗನರಸಿಂಹ ಸ್ವಾಮಿ, ಚೆಲುವನಾರಾಯಣಸ್ವಾಮಿಯವರ ದರ್ಶನಾಶೀರ್ವಾದ ಪಡೆದು, ಕಾವೇರೀ ನದಿಯನ್ನು ದಾಟಿ ಮಹಾಬಲಪರ್ವತವನ್ನು (ಚಾಮುಂಡಿಬೆಟ್ಟವನ್ನು) ಹತ್ತಿ ಚಾಮುಂಡೇಶ್ವರಿ ದೇವಿಯನ್ನು ಪೂಜಿಸಿ, ಪರ್ವತದ ಬಲಭಾಗದ ದಿಕ್ಕಿನಲ್ಲಿರುವ ಶ್ರೀಕಂಠೇಶ್ವರನ ದರ್ಶನ ಪಡೆದು ಧನ್ಯರಾಗಿ, ಆ ರಾತ್ರಿ ಸುಖನಿದ್ರೆಯಲ್ಲಿರಲು ಕನಸಿನಲ್ಲಿ ಹೆಣ್ಣು ರೂಪದಲ್ಲಿ ಅಮ್ಮನವರು ಕಾಣಿಸಿಕೊಂಡು ಹೀಗೆ ಹೇಳುತ್ತಾಳೆ.

ನಾಳೆ ಬೆಳಗ್ಗೆ ನಮ್ಮ ಪರ್ವತಕ್ಕೆ ಆಗ್ನೇಯ ಭಾಗದಲ್ಲಿ ನೆಲೆಸಿರುವ ದೇವಿಯನ್ನು ಪೂಜಿಸಿ, ಅಲ್ಲಿಂದ ಹೊರಟು ಮೈಸೂರಿನ ಪೂರ್ವಭಾಗದಲ್ಲಿ ತೃಣ ಬಿಂದು ಋಷಿಯಿಂದ ಆರಾಧಿಪನಾದ ಶಿವದೇವಾಲಯದ ಹಿಂಭಾಗದಲ್ಲಿರುವ ಕೆರೆಯ ಕೋಡಿ ಬೈರಪನ ದೇವಾಲಯಕ್ಕೆ ಹೋಗಿರು. ಅಷ್ಟರಲ್ಲಿ ಜಂಗಮ ವೇಷ ಧರಿಸಿಕೊಂಡು ಲಿಂಗಧಾರಿಯೊಬ್ಬರು ನಿನಗೆ ಮಾರ್ಗದರ್ಶನ ಮಾಡುತ್ತಾನೆ. ಅವನ ಮಾತನ್ನು ನೀನು ಕೇಳಿದರೆ ನಿನ್ನ ಆಶಯಗಳು ಈಡೇರುತ್ತವೆ. ಎಚ್ಚರಗೊಂಡ ಯದುರಾಯರು ತಮ್ಮನ ಜೊತೆ ಹೇಳಿಕೊಂಡು ಮೂರನೆಯ ದಿನ ಬೆಳಗ್ಗೆ ಶ್ರೀ ಚಾಮುಂಡೇಶ್ವರಿ ಅಮ್ಮನನ್ನು ಪೂಜಿಸಿ ಮೈಸೂರಿನ ತೃಣೇಶ್ವರ (ತ್ರಿನಯನೇಶ್ವರ ದೇವಸ್ಥಾನದ ಹಿಂಭಾಗದ ಕೆರೆಯ ಕೋಡಿ ಭೈರವನ ಗುಡಿಯಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದರು. ಆಗ ಶ್ರೀ ಚಾಮುಂಡೇಶ್ವರಿ ದೇವಿಯು ಹೀಗೆ ಹೇಳುತ್ತಾಳೆ. ಜಂಗಮ ಪುರುಷನು ಬಂದನು. ಯದುರಾಯರು ಅವನನ್ನು ಸನ್ಮಾನಿಸಿ ಸ್ವಪ್ನ ಕಥನ ನಿಜವೆಂದು ನಂಬುತ್ತಾರೆ. ಜಂಗಮನು ಯದುರಾಯರನ್ನು "ನೀನು ಯಾರು, ಯಾವ ದೇಶದಿಂದ ಬಂದೆ?"ಎಂದು ಕೇಳಿ ಅವರಿಂದ ಸ್ವಪ್ನದರ್ಶನಾದಿ ವಿವರಗಳನ್ನು ತಿಳಿದುಕೊಂಡು ಹೀಗೆಂದು ಹೇಳುತ್ತಾನೆ.

ಎಲೈ ರಾಜಕುಮಾರನೆ, ಪೂರ್ವದಲ್ಲಿ ಭೋಜ ವಂಶದ ಶೂರದೇವನೆಂಬ ಅರಸನ ಒಂದು ಕಾಲದಲ್ಲಿ ಮಥುರಾನಗರವನ್ನು ಕುಟುಂಬ ಸಮೇತ ಬಿಟ್ಟು ಕರ್ನಾಟಕದ ಮೈಸೂರಿನ ಶ್ರೀ ಚಾಮುಂಡಿ ಅಮ್ಮನವರ ಅನುಗ್ರಹದಿಂದ ಮೈಸೂರಿನ ದೊರೆಯಾಗಿ ಅವನ ವಂಶದಲ್ಲಿ ಚಾಮರಾಜನೆಂಬ ದೊರೆ ಜನಿಸಿ ರಾಜ್ಯ ಆಳುತ್ತಿರಲು, ಅವನಿಗೆ ಒಬ್ಬ ಮಗಳು ಹುಟ್ಟಿದಳು. ನಗರಕ್ಕೆ ದೊರೆಯಿಲ್ಲದ್ದ ಕಾಣಿ. ದುಷ್ಟ ಸೇನಾಪತಿ ಮಾರನಾಯಕನು ರಾಣಿ ದೇವಮ್ಮಣ್ಣಿಗೆ ಹಿಂಸೆ ಕೊಡುತ್ತಿದ್ದನು. ಇವನನ್ನು ನೀನು ಕೊಲ್ಲಬೇಕು. ಈ ವಿಷಯವನ್ನು ಮತ್ತೊಬ್ಬ ಜಂಗಮ ಪುರುಷನು ತಿಳಿಸುವನು. ಆ ಪ್ರಕಾರ ನೀನು ನಡೆದರೆ ರಾಜಕುಮಾರಿಯನ್ನು ಮದುವೆಯಾಗಿ ಮಹಾರಾಜ ಪದವಿಯನ್ನು ಹೊಂದುವೆ ಎಂದು ಹೇಳಿ ಜಂಗಮನು ಕಣ್ಮರೆಯಾಗುತ್ತಾನೆ. ಈ ಮಾತನ್ನು ಕೇಳಿದ ಯದುರಾಯ ಕೃಷ್ಣರಾಯರಿಗೆ ಆಶ್ಚರ್ಯವಾಯಿತು. ಭಕ್ತಿಭಾವದಿಂದ ಆಲೋಚಿಸಿ ನಂಜನಗೂಡಿನ ಶ್ರೀಕಂಠೇಶ್ವರನೇ ಜಂಗಮ ವೇಷದಲ್ಲಿ ಬಂದವನೆಂದು ತಿಳಿದು, ಶ್ರೀ ಚಾಮುಂಡೇಶ್ವರಿಯನ್ನು, ಶ್ರೀಕಂಠೇಶ್ವರನನ್ನು ತಮ್ಮ ಕುಲದೇವರನ್ನಾಗಿ ಮಾಡಿಕೊಂಡರು. ಯದುವಂಶದ ಪರಂಪರೆ ಮತ್ತು ಬೆಳವಣಿಗೆ ಹೀಗೆ ಮುಂದುವರಿಯುತ್ತದೆ. ಈ ವಿಚಾರವನ್ನು ಅನೇಕ ವಿದ್ವಾಂಸರು ಸಂಶೋಧಿಸಿ, ಪರಾಮರ್ಶಿಸಿ ಸಮ್ಮತಿ ಸೂಚಿಸಿದ್ದಾರೆ.

ಶ್ರೀ ಯದುರಾಯ ಕೃಷ್ಣರಾಯರು ದ್ವಾರಕೆಯ ಮೂದಲವರು. ಶ್ರೀ ಕೃಷ್ಣ ಜನಿಸಿದ ಯದುವಂಶದಲ್ಲಿ ಜನಿಸಿದವರು. ಮೈಸೂರಿಗೆ ಬಂದು ನೆಲೆಸುವಂತಾದುದು ದೈವಿಕವಾದ ಸ್ವಪ್ನಗಳ ಪ್ರಕಾರ ನಡೆದ ಘಟನೆಗಳ ಕಾರಣದಿಂದ ಎನ್ನುವ ಸಂಗತಿಗಳು ಸ್ವಾಭಾವಿಕವಾಗಿಯೇ ಐತಿಹ್ಯವಾಗಿ ಹುಟ್ಟಿ ಬೆಳೆದಿವೆ ಎಂದರೆ ತಪ್ಪಾಗಲಾರದು. ಇವುಗಳೆಲ್ಲ ಬೆಳಕಿಗೆ ಬಂದು ಪ್ರಚಲಿತವಾದುದು. 17 ರಿಂದ 19ನೆಯ ಶತಮಾನಗಳ ಅಂತರದಲ್ಲಿ ಕಾಣಿಸಿಕೊಂಡಿವೆ. ಆದರೆ ಈ ಐತಿಹ್ಯಗಳನ್ನು ಚರಿತ್ರಕಾರರು ಪರಾಮರ್ಶಿಸಿ ಸಂಶೋಧಿಸಿದ್ದಾರೆ. ಇದು ಪ್ರಸಿದ್ಧ ಚಿಂತಕರೂ ಸಂಶೋಧಕರೂ ಆದ ಡಾ. ಟಿ.ವಿ. .ವೆಂಕಟಾಚಲ ಶಾಸ್ತ್ರಿಯವರ ಅಭಿಮತವೂ ಕೂಡ. ಮೈಸೂರು ಒಡೆಯರ ವಂಶದ ಆರಂಭ 1399 ಎನ್ನುವುದನ್ನು ದೃಢಪಡಿಸುವ ಆಧಾರಗಳು ಸುಮಾರು 1550ರ ಪೂರ್ವದ ಯಾವುದೇ ಶಾಸನಗಳಲ್ಲಿಯಾಗಲಿ ಇತರ ಆಕರಗಳಲ್ಲಾಗಲಿ ಸಿಗುವುದಿಲ್ಲ. ದೇವಚಂದ್ರನ ರಾಜಾವಳೀ ಕಥೆಯಲ್ಲಿ ಆಳ್ವಿಕೆಯ ಪ್ರಾರಂಭದ ವಿವರಗಳು ಇತರ ಆಕರಗಳಲ್ಲಿ ಹೇಳಿರುವುದಕ್ಕಿಂತ ಭಿನ್ನವಾಗಿವೆ.

ಇದ್ದುದರಲ್ಲಿ ಮೈಸೂರು ನಗರದ ಪೂರ್ವೋತ್ತರ ಎಂಬ ಐತಿಹಾಸಿಕ ಆಕರದ ಭಾಷೆ ಮತ್ತು ವಿವರಗಳನ್ನು ಗಮನಿಸಿದರೆ ಮೇಲಿನ ಅಂಶಗಳೆಲ್ಲ ಸತ್ಯ

ಸಂಗತಿಯಿಂದ ಕೂಡಿವೆ ಎಂಬುದನ್ನು ದೃಢಪಡಿಸಬಹುದು.

ಶ್ರೀ ಯದುರಾಯರಿಂದ ಆರಂಭವಾಗುವ ಈ ಮನೆತನದ ಇತಿಹಾಸ ಪ್ರಸ್ತುತ ಶ್ರೀ ಯದುವೀರ ಕೃಷ್ಣದತ್ತ ಚಾಮರಾಜ ಒಡೆಯರ್‌ರವರವರೆಗೆ 27 ದೊರೆಗಳನ್ನು ನೋಡಬಹುದು.

1. ಯದುರಾಯರು – 1399 – 1423
2. ಹಿರಿಯ ಬೆಟ್ಟದ ಚಾಮರಾಜ ಒಡೆಯರು – 1423–1459
3. ತಿಮ್ಮರಾಜ ಒಡೆರಯರು – 1478–1543
4. ಹಿರಿಯ ಚಾಮರಾಜ ಒಡೆಯರು – 1478–1513
5. ಬೆಟ್ಟದ ಚಾಮರಾಜ ಒಡೆಯರು – 1513–1553
6. ಇಮ್ಮಡಿ ತಿಮ್ಮರಾಜ ಒಡೆಯರು – 1513–1572
7. ಬೋಳ (ನಾಲ್ವಡಿ) ಚಾಮರಾಜ ಒಡೆಯರು – 1572–1576
8. ಬೆಟ್ಟದ (ಐವಡಿ) ಚಾಮರಾಜ ಒಡೆಯರು – 1576–1578
9. ರಾಜ ಒಡೆಯರು – 1578–1617
10. ಚಾಮರಾಜ ಒಡೆಯರು – 1617–1637
11. ಇಮ್ಮಡಿ ರಾಜ ಒಡೆಯರು – 1637–1638
12. ರಣಧೀರ ಕಂಠೀರವ ನರಸರಾಜ ಒಡೆಯರು – 1638–1659
13. ದೊಡ್ಡದೇವರಾಜ ಒಡೆಯರು – 1659–1673
14. ಚಿಕ್ಕದೇವರಾಜ ಒಡೆಯರು – 1673–1704
15. ಕಂಠೀರವ ಒಡೆಯರು – 1704–1714
16. ದೊಡ್ಡ ಕೃಷ್ಣರಾಜ ಒಡೆಯರು– 1714–1732
17. ಚಾಮರಾಜ ಒಡೆಯರು – 1732–1734
18. ಇಮ್ಮಡಿ ಕೃಷ್ಣರಾಜ ಒಡೆಯರ್– 1734–1766
19. ನಂಜರಾಜ ಒಡೆಯರು – 1766–1770
20. ಬೆಟ್ಟದ ಚಾಮರಾಜ ಒಡೆಯರ್ – 1770–19766
21. ಖಾಸಾ ಚಾಮರಾಜ ಒಡೆಯರ್ – 1796–1796
22. ಮುಮ್ಮಡಿ ಕೃಷ್ಣರಾಜ ಒಡೆಯರು – 1799–1868

23. ಚಾಮರಾಜೇಂದ್ರ ಒಡೆಯರು – 1869–1864
24. ನಾಲ್ವಡಿ ಕೃಷ್ಣರಾಜ ಒಡೆಯರು – 1864–1940
25. ಜಯಚಾಮರಾಜೇಂದ್ರ ಒಡೆಯರು – 1940–1974
26. ಶ್ರೀಕಂಠದತ್ತ ನರಸಿಂಹರಾಜ ಒಡೆಯರು – 1974–2013
27. ಶ್ರೀ ಯದುವೀರಕೃಷ್ಣದತ್ತ ಚಾಮರಾಜ ಒಡೆಯರು – 2015–

ರಾಜ ಮಾತಾ ಶ್ರೀಮತಿ ಪ್ರಮೋದದೇವಿ ಒಡೆಯರ್‌ರವರು ಶ್ರೀ ಕಂಠದತ್ತ ನರಸಿಂಹರಾಜ ಒಡೆಯರ್ ನಿಧನದ ಅನಂತರ – 2013ರಿಂದ 2015ರವರೆಗೆ ರಾಜಮನೆತನದ ಎಲ್ಲಾ ಆಡಳಿತವನ್ನು ನೋಡಿಕೊಂಡರು. 2015ರಲ್ಲಿ ಶ್ರೀ ಯದುವೀರ ಶ್ರೀಕೃಷ್ಣದತ್ತ ಚಾಮರಾಜ ಒಡೆಯರ್‌ರವರನ್ನು ದತ್ತು ಮಗನನ್ನಾಗಿ ಸ್ವೀಕರಿಸಿದ ಮೇಲೆ ಎಲ್ಲರ ಸಮಸಮಕ್ಷಮದಲ್ಲಿ ರಾಜಮನೆತನದ ಸಂಪ್ರದಾಯದಂತೆ 2015ರಲ್ಲಿ ಪಟ್ಟಾಭಿಷೇಕವಾಯಿತು. ಕಳಚಿ ಹೋಗಿದ್ದ ಮಹಾಸಂಸ್ಥಾನದ ಪರಂಪರೆ ಇದರಿಂದ ಮುಂದುವರಿದಂತಾಯಿತು. ನಾಡಿನ ಜನತೆ ಇದನ್ನು ಬಹಳ ಸಂಭ್ರಮ, ಸಡಗರದಿಂದ ಸ್ವೀಕರಿಸಿ ಆನಂದಿಸಿದರು.

ಮೈಸೂರು ಸಂಸ್ಥಾನದವರಿಗೆ ಗೌರವ ಸೂಚಕವಾಗಿ, ಅಧಿಕಾರ ಸೂಚಕವಾಗಿ ಬಂದಿರುತ್ತದೆ. ಇದು 33 ಗ್ರಾಮಗಳ ಪ್ರಾಂತ್ಯದ ಅಧಿಪತ್ಯ ಸೂಚಕವಾಗಿ ಬಂದಿದೆ ಎಂದು ತಿಳಿದುಬರುತ್ತದೆ. ರಾಜಮಾತೆಯೊಂದಿಗೆ ಸಂಪರ್ಕ ರಾಜಕುಮಾರಿಯೊಂದಿಗೆ ಸಂಪರ್ಕ.

ಬೆಳೆಸಲು ನೆರವಾದ ಜಂಗಮಯ್ಯನ ಅಪೇಕ್ಷೆಯ ಮೇರೆಗೆ ಈ ಮನೆತನದ ಅರಸರುಗಳು 'ಒಡೆಯರ್' ಎಂಬುದನ್ನು ತಮ್ಮ ಹೆಸರಿನೊಂದಿಗೆ ಸೇರಿಸಿಕೊಳ್ಳಲು ಯದುರಾಯರು ಸಮ್ಮತಿಸಿದರೆಂದೂ ಐತಿಹ್ಯವಿದೆ. ರಾಜಾಧಿರಾಜ, ರಾಜಪರಮೇಶ್ವರ, ಲೋಕೈಕವೀರ, ಅಪ್ರತಿಮ ವೀರ, ಪ್ರೌಢ ಪ್ರತಾಪ ಮುಂತಾದ ಬಿರುದುಗಳು ಚಿಕ್ಕದೇವರಾಜರ ಕಾಲಾನಂತರ ಶಾಸನಗಳಲ್ಲಿ ಹೆಚ್ಚು ಇವರು ಆತ್ರೇಯನಗೋತ್ರದ ಆಶ್ವಲಾಯನ ಸೂತ್ರದ ಋಕ್ ಶಾಖೆಯ ಪರಂಪರೆಯವರು ಇವರು.

ಖಾಸಾಚಾಮರಾಜ ಒಡೆಯರು 28.02.1774ರಲ್ಲಿ ಜನಿಸಿದರು. ಇವರು 20 ವರ್ಷಗಳ ಕಾಲ ರಾಜ್ಯಭಾರ ಮಾಡಿದವರು. ಇವರು ಬಾಲಕರಾದುದರಿಂದ ಇವರ ಹೆಸರಿನಲ್ಲಿ ಹೈದರಾಲಿ ಟೀಪೂ ಸುಲ್ತಾನ್ ಆಡಳಿತವನ್ನು ನಡೆಸಿದರು. ಪೂರ್ಣಯ್ಯ, ತೋಪಿಖಾನೆ, ಕೃಷ್ಣರಾಯ, ಬಚ್ಚೇರಾಯ, ಅಂಚೆಶಾಮಯ್ಯ, ಪ್ರಧಾನಿ

ವೆಂಕಪ್ಪಯ್ಯ, ಮುಂತಾದವರು ವಿವಿಧ ಇಲಾಖೆಗಳಲ್ಲಿ ಅಧಿಕಾರಿಗಳಾಗಿ ಕೆಲಸ ನಿರ್ವಹಿಸಿದ್ದಾರೆ. ಅಧಿಕಾರ ಮತ್ತು ಸ್ವಾತಂತ್ರ್ಯಗಳನ್ನು ನಿಡದೆ ಅವರನ್ನು ಸರ್ಪಕಾವಲಿನೊಂದಿಗೆ ಇರಿಸಲಾಗಿತ್ತು. ಹೈದರಾಲಿಯ ಮರಣ, ಟೀಪೂಸುಲ್ತಾನನ ಅದಿಪತ್ಯ ಚಾಮರಾಜ ಒಡೆಯರ ಕಾಲದ ಮುಖ್ಯ ಘಟನೆಗಳಾದವು. ಕಾಲಾನಂತರದಲ್ಲಿ ಖಾಸ ಚಾಮರಾಜರು ಪ್ರಾಪ್ತವಯಸ್ಕರಾದಾಗ ಇವರನ್ನು ನಿಗ್ರಹಿಸಲು ಪ್ರಯತ್ನಿಸಿದರು. ಅನಂತರ ಸ್ವಲ್ಪ ಕಾಲದಲ್ಲಿಯೇ ಅಂದರೆ 17.04.1796 ರಂದು ಸ್ವರ್ಗಸ್ಥರಾದರು.

ಕೆಂಪನಂಜಮ್ಮಣ್ಣಿ, ಕೆಂಪದೇವಾಜಮ್ಮಣ್ಣಿ, ಚೆಲುವಾಜಮ್ಮಣ್ಣಿ, ದೇವೀರಮ್ಮಣ್ಣಿ, ನಂಜಮ್ಮಣ್ಣಿ, ಲಕ್ಷ್ಮಮ್ಮಣ್ಣಿ, ದೇವಾಜಮ್ಮಣ್ಣಿ ಇವರ ಪತ್ನಿಯರು ಕೆಂಪನಂಜಮ್ಮಣ್ಣಿ ಯವರ ಮಗನೇ ಶ್ರಿ ಮುಮ್ಮಡಿ ಕೃಷ್ಣರಾಜ ಒಡೆಯರು.

ಕರ್ನಾಟಕ ಇತಿಹಾಸ, ಪರಂಪರೆ ಹಾಗೂ ಸಂಪ್ರದಾಯಗಳ ತವರೂರು. ಅದರಲ್ಲೂ ಮೈಸೂರು ಸಾಂಸ್ಕೃತಿಕ ನಗರವೆಂದೇ ಪ್ರಸಿದ್ಧಿ ಪಡೆದಿದೆ. ದಸರಾ ಮಹೋತ್ಸವದ ಮೂಲಕ ವಿಶ್ವಕ್ಕೆ ಪರಂಪರೆಯ ಪ್ರಖ್ಯಾತಿಯನ್ನು ತಂದುಕೊಟ್ಟಿದೆ. ಸಾಂಪ್ರದಾಯಿಕ ಆಚರಣೆಗಳನ್ನು ಅನಾವರಣಗೊಳಿಸುವ ಸಾಂಸ್ಕೃತಿಕ ಕೇಂದ್ರವೂ ಕೂಡ. ಮಹಾರಾಜರಾಗಿ ಪಟ್ಟಾಭಿಷಕ್ತರಾದವರು ತಮ್ಮ ಘನತೆ ಗಾಂಭೀರ್ಯದ ಕುರುಹೂವಾಗಿ ರಾಜಲಾಂಛನ, ಸಿಂಹಾಸನ, ರಾಜಮುದ್ರೆ, ರಾಜದಂಡ, ಪಟ್ಟದ ಆನೆ, ಪಟ್ಟದ ಕುದುರೆ, ಪಟ್ಟದ ಹಸು, ಪಟ್ಟದ ರಾಣಿ, ಪಟ್ಟದ ಕತ್ತಿ ಇವುಗಳು ಇರಲೇಬೇಕು. ಇದು ಆಯಾ ರಾಜಮನೆತನಗಳ ಪ್ರತಿಷ್ಠೆಯು ಕೂಡ.

ಈ ಹಿನ್ನೆಲೆಯಲ್ಲಿ ಮೈಸೂರು ಮಹಾಸಂಸ್ಥಾನವು ದೇಶದಲ್ಲಿಯೇ ಮಾದರಿ ಸಂಸ್ಥಾನವಾಗಿ ರೂಪೂಗೊಂಡಿರುವುದನ್ನು ಮತ್ತೊಮ್ಮೆ ಹೇಳಬೇಕಾಗಿಲ್ಲ. ವಿಶೇಷವೆಂದರೆ 1799ರಲ್ಲಿ ಬ್ರಿಟಿಷ್‌ರೊಂದಿಗೆ ಯುದ್ಧದಲ್ಲಿ ಟಿಪ್ಪು ಮರಣ ಹೊಂದಿದ ಅನಂತರ, ಆತನ ಆಡಳಿತಕ್ಕೆ ಒಳಪಟ್ಟ ಮೈಸೂರು ಮಹಾಸಂಸ್ಥಾನಕ್ಕೆ ಉತ್ತರಾಧಿಕಾರಿಯಾಗಿ 1796 ರಲ್ಲಿ ನಿಧನರಾಗಿದ್ದ ಖಾಸಾ ಚಾಮರಾಜ ಒಡೆಯರ್ ಅವರ ಪುತ್ರ, ಐದು ವರ್ಷದ ರಾಜ ಕುಮಾರರಾದ ಶ್ರೀಮುಮ್ಮಡಿಕೃಷ್ಣರಾಜ ಒಡೆಯರ್ ಅವರಿಗೆ ಕಾರ್ಮಿಕರ ಜೋಪಡಿ ಯುದ್ಧ ಸ್ಥಳದಲ್ಲಿ ಪಟ್ಟಾಭಿಷೇಕವಾಯಿತು. ಇದಕ್ಕೆ ಬ್ರಿಟಿಷರ ಒಪ್ಪಿಗೆಯೂ ಇತ್ತು. ಪಟ್ಟಾಭಿಷೇಕ ಮಾಡುವ ಸಂದರ್ಭದಲ್ಲಿ ಹಳೆ ಮೈಸೂರಿನ ಕೋಟೆ, ಮನೆಗಳು, ಅರಮನೆ ಎಲ್ಲವು ನೆಲಸಮವಾಗಿದ್ದವು, ಪಟ್ಟಾಭಿಷೇಕಕ್ಕಾಗಿ ಮೈಸೂರಿಗೆ ಆಗಮಿಸಿದ ರಾಜರು, ಬಂಧು ಬಳಗ, ಆಪ್ತರುಗಳಿಗೆ ನಜರ್‌ಬಾದಿನಲ್ಲಿದ್ದ ಕೂಲಿಕಾರರ ಗುಡಿಸಲುಗಳನ್ನು ಸುಸಜ್ಜಿತ

ಮನೆಗಳನ್ನಾಗಿ ಪರಿವರ್ತಿಸಿ. ಅವರುಗಳಿಗೆ ವಾಸ್ತವ್ಯಕ್ಕೆ ಅನುವು ಮಾಡಿಕೊಟ್ಟಿದ್ದರು. ಅಂದು ಇದು ಅನಿವಾರ್ಯವಾಗಿತ್ತು. ಆ ಮನೆಗಳ ಮುಂದೆಯೇ ಚಪ್ಪರ ಹಾಕಿ 1799 ರ ಜೂನ್ 30 ರಂದು ಬಾಲಕ ಮುಮ್ಮಡಿಯವರಿಗೆ ಪಟ್ಟಾಭಿಷೇಕವಾಯಿತು. ಹಲವು ವರ್ಷಗಳಿಂದ ಸ್ಥಗಿತಗೊಂಡಿದ್ದ ಮೈಸೂರು ದಸರಾ ಹಬ್ಬವನ್ನು ಮತ್ತೆ ಪ್ರಾರಂಭಿಸಿದರು. ಅನಂತರ ಮುಮ್ಮಡಿಯವರ ಬದುಕೆ ಹೋರಾಟವಾಗಿ ಪರಿವರ್ತನೆಗೊಂಡಿತು.

1891ರಲ್ಲಿ 10ನೆಯ ಚಾಮರಾಜ ಒಡೆಯರ್ ಪ್ರಾಚೀನ ಗ್ರಂಥಗಳ ಸಂರಕ್ಷಣೆ ಮತ್ತು ಪ್ರಕಟಣೆ ಮಾಡುವ ದೂರದೃಷ್ಟಿಯಿಂದ ಪ್ರಾಚ್ಯವಿದ್ಯಾ ಸಂಶೋಧನಾಲಯವನ್ನು ಸಂಸ್ಥಾಪಿಸಿದರು. ಬ್ರಿಟನ್ ಸಾಮ್ರಾಜ್ಞಿ ವಿಕ್ಟೋರಿಯಾ ರಾಣಿಯರ ಸಿಂಹಾಸನರೋಹಣದ ಸ್ಮರಣಾರ್ಥ ನಿರ್ಮಿಸಲಾದ 'ಜ್ಯುಬಿಲಿ ಹಾಲ್' ಭವನದಲ್ಲಿ ಈ ಸಂಸ್ಥೆಯು ಪ್ರಾರಂಭಗೊಂಡಿತು. 1916ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಸ್ಥಾಪನೆಯಾದ ಮೇಲೆ ಅದರ ಅಧೀನಕ್ಕೆ ಒಳಪಟ್ಟಿತು. ಇಲ್ಲಿ ಸಹಸ್ರಾರು ಆಯುರ್ವೇದ ಧರ್ಮಶಾಸ್ತ್ರ, ಜ್ಯೋತಿಷ್ಯಶಾಸ್ತ್ರ, ಅರ್ಥಶಾಸ್ತ್ರ ಮುಂತಾದ 23 ಸಾವಿರಕ್ಕಿಂತಲೂ ಗ್ರಂಥಗಳನ್ನು ಮತ್ತು 70 ಸಾವಿರಕ್ಕಿಂತಲೂ ಹೆಚ್ಚಿನ ಶೀರ್ಷಿಕೆಗಳುಳ್ಳ ಹಸ್ತಪ್ರತಿಗಳನ್ನು ಸಂರಕ್ಷಿಸಲಾಗಿದೆ. ಇಲ್ಲಿ ಡಾ. ಆರ್ ಶ್ಯಾಮಶಾಸ್ತ್ರಿಗಳು ಸಂಪಾದಿಸಿರುವ ಕೌಟಿಲ್ಯಶಾಸ್ತ್ರದ ಮೂಲ ಹಸ್ತಪ್ರತಿಯನ್ನು ಸಂರಕ್ಷಿಸಲಾಗಿದೆ. ಇದರಲ್ಲಿ 168 ಹಾಳೆಗಳು, 375 ಸೆಂ.ಮೀ. ಉದ್ದಉಳ್ಳದ್ದಾಗಿದೆ. 1909ರಲ್ಲಿ ಕನ್ನಡ ಇಂಗ್ಲಿಷ್‌ನಲ್ಲಿ ಪ್ರಕಟವಾಗಿದೆ. ಆಡಳಿತ, ಅರ್ಥವ್ಯವಸ್ಥೆ, ಸೈನ್ಯ, ಕಾನೂನು ಸುವ್ಯವಸ್ಥೆ, ತೆರಿಗೆ ವ್ಯವಸ್ಥೆ ಮುಂತಾದ ದೇಶಕ್ಕೆ ಬೇಕಾದ ಎಲ್ಲಾ ಅವಶ್ಯಕ ಮಾರ್ಗದರ್ಶನ ಈ ಗ್ರಂಥದಲ್ಲಿ ಸಿಗುತ್ತದೆ.

ಇದು ಗ್ರಂಥ ಲಿಪಿಯಲ್ಲಿದ್ದು, ಕ್ರಿ.ಪೂ. 4ನೇ ಶತಮಾನದ ವಿಷ್ಣುಗುಪ್ತನ ಅಥವಾ ಚಾಣುಕ್ಯನ ಆಡಳಿದ ವೈಖರಿ ಇದಾಗಿದೆ. ಪ್ರಪಂಚದಲ್ಲಿ ಅಪರೂಪವೆನಿಸಿರುವ ವೀರಮಹೇಶ್ವರಾಚಾರಸಂಗ್ರಹವು 77 ಅಧ್ಯಾಯಗಳಿಂದ ಕೂಡಿದ್ದು, ಕ್ರಿಶ 13ನೆಯ ಶತಮಾನದ್ದು, 9x6 cm ಉದ್ದದ ಹಸ್ತಪ್ರತಿ ಇದಾಗಿದ್ದು, ಪ್ರಪಂಚದಲ್ಲೇ ಅಪರೂದ್ದೆನಿಸಿ, ಕನ್ನಡ ಲಿಪಿಯಲ್ಲಿದ್ದು, ವೀರಶೈವ ತತ್ತ್ವ ಸಿದ್ಧಾಂತಗಳನ್ನು ಹೊಂದಿರುವುದು ಮತ್ತೊಂದು ವಿಶೇಷ ಮತ್ತು ಅತ್ಯಂತ ಚಿಕ್ಕದಾದ ಭಗವದ್ಗೀತೆ ಹಸ್ತಪ್ರತಿಯು ನಂದಿನಾಗರಿ ಲಪಿಯಲ್ಲಿದ್ದು, 5.5 x 4.3 ಸೆ.ಮೀ ಉದ್ದವುಳ್ಳ ಇದು ಪ್ರಪಂಚದಲ್ಲಿಯೇ ಅತಿ ಚಿಕ್ಕದಾದ ಹಸ್ತಪ್ರತಿ ಇದಾಗಿದೆ.

ಮುಮ್ಮಡಿಯವರು ಪ್ರಾಚ್ಯವಿದ್ಯಾ ಸಂಶೋಧನಾಲಯಕ್ಕೆ ಸಾಹಿತ್ಯದ ಮೂಲಕ ಹೊಸ ರೂಪವನ್ನು ನೀಡಿದವರು. ಜೊತೆಗೆ ಶ್ರೀತತ್ತ್ವನಿಧಿಯ ಮೂಲಕ

ನವನಿಧಿಗಳನ್ನು ಸಾಹಿತ್ಯಲೋಕಕ್ಕೆ ಸಮರ್ಪಿಸಿದ ಇವರು ಬದುಕಿ ಬಾಳಿ ಕ್ಲಿಷ್ಟ ಕಾಲದಲ್ಲಿ ಸಾಧನೆಗೈದವರು. ತಮ್ಮ 18ನೇ ವಯಸ್ಸಿನಲ್ಲಿ ರಾಜ್ಯಭಾರ ವಹಿಸಿಕೊಂಡು, ಕೇವಲ 13 ವರ್ಷಗಳ ಸಾರ್ಥಕ ಆಡಳಿತ ನಡೆಸಿದವರು. ಇಂದಿಗೂ ಜಗತ್ತು ಮೆಚ್ಚುವ, ಅನುಸರಿಸುವ ಆಧುನಿಕ ಜನತಂತ್ರವನ್ನು ರೂಪಿಸಿ ರೂವಾರಿಯಾದವರು. ಚರಿತ್ರೆ, ಸಾಹಿತ್ಯ ಚರಿತ್ರೆ, ಇವೆರಡರಲ್ಲಿಯೂ ಸ್ಥಾನ ಪಡೆಯುವ ವ್ಯಕ್ತಿಗಳ ಉದಾಹರಣೆಗಳು ತುಂಬಾ ವಿರಳ. ಆದರೆ ಶ್ರೀಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ಇಂತಹ ವಿರಳರಲ್ಲಿ ಒಬ್ಬರಾಗಿದ್ದಾರೆ.

ಶ್ರೀಮುಮ್ಮಡಿಯವರ ಕಾಲದಲ್ಲಿ ಸಾಹಿತ್ಯದ ಲಕ್ಷಣಗಳನ್ನು ಸ್ಥೂಲವಾಗಿ ಅವಲೋಕಿಸುವುದಾದರೆ ಗದ್ಯ ಸಾಹಿತ್ಯದ ಸಾರ್ವಭೌಮತ್ವ, ಇತಿಹಾಸ ಪುರಾಣಾಧಿ ವೈಧಿಕ ಸಾಹಿತ್ಯದ ಪುನರ್‌ನಿರ್ಮಾಣ, ಮಾಹಾತ್ಮ್ಯಗಳ ಪ್ರಾಸಸ್ತ್ಯ, ಕೀರ್ತನೆ ಮತ್ತು ಹಾಡುಗಳ ಮೂಲಕ ಸಾಹಿತ್ಯ ಸುಗ್ಗಿಯನ್ನೇ ಉಂಟುಮಾಡಿದ್ದಾರೆ. ಇವರು ಮತ್ತು ನಾಲ್ವಡಿ ಕೃಷ್ಣರಾಜಒಡೆಯರ್‌ಅವರ ಕಾಲವನ್ನು "ಸುವರ್ಣಯುಗ" ಎನ್ನಬಹುದು. ಮೈಸೂರು ಅರಸರ ಕಾಲದಲ್ಲಿ ಗದ್ಯ ಸಾಹಿತ್ಯಕ್ಕೆ ನವ ಚೈತನ್ಯ ದೊರೆಯಿತು. ಒಂದು ಸಾವಿರ ವರ್ಷಗಳ ಇತಿಹಾಸದಲ್ಲಿ ನಮಗೆ ಸಿಗುವ ಗಧ್ಯ ಗ್ರಂಥಗಳೆಂದರೆ ವಡ್ಡಾರಾಧನೆ ಮತ್ತು ಚಾವುಂಡರಾಯ ಪುರಾಣ, ಹರಿಹರ ರಗಳೆಗಳ ನಡುವೆ ಗದ್ಯವನ್ನು ಬಳಸುವ ಪರಿಪಾಟವುಂಟು. ಕತನ ಕಲೆಗೆ ಲೌಕಿಕ ವಿಷಯಗಳ ನಿರೂಪಣೆಗೆ ಶಾಸ್ತ್ರೀಯ ವಿಷಯಗಳ ಪ್ರತಿಪಾದನೆಗೆ, ಗದ್ಯ ಸಶಕ್ತವಾದ ಮಾಧ್ಯಮವೆಂಬುದನ್ನು ಮರೆಯುವಂತಿಲ್ಲ. ಸಂಸ್ಕೃತ, ಕನ್ನಡ, ಕಾವ್ಯ ಇತಿಹಾಸಗಳ ಗಂಗಾ ಪ್ರವಾಹವನ್ನು ಕನ್ನಡ ನಾಡಿನ ಮನೆಮನೆಯ ಬಾಗಿಲಿಗೆ ತಲುಪಿಸುವಲ್ಲಿ ಶ್ರೀಮುಮ್ಮಡಿ ಕೃಷ್ಣರಾಜಒಡೆಯರ್‌ಅವರ ಕೊಡುಗೆ ಅವಿಸ್ಮರಣೀಯವಾದುದು. ರಾಜ್ಯದ ದೊರೆಯೇ ಈ ಹಾದಿಯನ್ನು ಹಿಡಿದಾಗ ಪಂಡಿತರು, ವಿದ್ವಾಂಸರು ಅವರ ಆದೇಶವನ್ನು ಅನುಸರಿಸಲೇಬೇಕು. ಇದರಿಂದ ನಾಡುನುಡಿಗೆ ಸ್ಫೂರ್ತಿಬಂದಂತಾಗಿ, ಸಾಹಿತ್ಯ ಸಂಸ್ಕೃತಿಯ ಪುನರುತ್ಥಾನ ಇಮ್ಮಡಿಗೊಂಡಿತು ಎಂಬುದರಲ್ಲಿ ಸಂದೇಹವಿಲ್ಲ.

ದನಿ ಇಲ್ಲದ ಜನಪದಕ್ಕೆ, ನಾಡುನುಡಿಗೆ ಪ್ರಾತಿನಿದ್ಯ ಕೊಡುವ ವೇದಿಕೆ ನಿರ್ಮಿಸಿದವರು. ಮತ್ತೊಂದು ಮಹತ್ತ್ವದ ಸಂಗತಿ ಎಂದರೆ ಮಹಿಳಾ ಸಂಕುಲಕ್ಕೆ ಶೈಕ್ಷಣಿಕ ಜಾಗೃತಿಯನ್ನುಂಟು ಮಾಡಿದವರು. ಬೆಳಗುವ ವಿದ್ಯುತ್ ದೀಪಗಳನ್ನು ಉತ್ಪಾದಿಸುವ ಜಲವಿದ್ಯುತ್ ಯೋಜನೆಯನ್ನು ಶಿವನಸಮುದ್ರದಲ್ಲಿ ಸ್ಥಾಪಿಸಿದರು. ಖನಿಜ, ಭೂಗರ್ಭ ಇಲಾಖೆ, ಪ್ರಾಣಿ ಸಂಗ್ರಹಾಲಯ, ಮುಂತಾದ ದೂರದೃಷ್ಟಿಯ ಹತ್ತಾರು ಜನಪರ ಕ್ರಿಯಾ ಯೋಜನೆಗಳನ್ನು ಸ್ಥಾಪಿಸುವುದರ ಮೂಲಕ ಸಮಾಜಮುಖಿಯ ಹರಿಕಾರರಾದರು. ಸೇರಿಸಿ ಇವರು ಭೌತಿಕವಾಗಿ ನಮ್ಮ

ಜೊತೆ ಇಲ್ಲದಿದ್ದರೂ ಅವರ ಕ್ರಿಯಾಯೋಜನೆಗಳು ನೆಲ, ಜಲ ಇರುವ ತನಕ ಚಿರಸ್ಥಾಯಿಯಾಗಿ ಉಳಿದಿರುತ್ತವೆ ಎಂಬುದಂತು ಸತ್ಯ.

ಪ್ರಾಚ್ಯವಿದ್ಯಾ ಸಂಶೋಧನಾಲಯದ ಮೂಲಕ ಇವೇ ಮುಂತಾದ ಹತ್ತು ಕೃತಿಗಳನ್ನು ಪ್ರಕಟಿಸಬೇಕೆಂಬ ಯೋಜನೆಯನ್ನು ರೂಪಿಸಿಕೊಂಡು ಸನ್ಮಾನ್ಯ ಕುಲಪತಿಗಳಾದ ಪ್ರೊ. ಜಿ. ಹೇಮಂತ್ ಕುಮಾರ್‌ಅವರ ಬಳಿ ನಿವೇದನೆ ಮಾಡಿಕೊಂಡಾಗ ಅವರು ಬಹಳ ಸಂತೋಷದಿಂದ ಒಪ್ಪಿಕೊಂಡು, ಸಾಹಿತ್ಯ ಸಂಸ್ಕೃತಿಗೆ ಸಮಾಜಮುಖಿ ಕೆಲಸ ಕಾರ್ಯಗಳಿಗೆ ಸದಾ ನನ್ನ ಬೆಂಬಲ ಇರುತ್ತದೆ ಎಂದು ಸಂತೋಷವನ್ನು ವ್ಯಕ್ತಪಡಿಸುವುದರ ಜೊತೆಗೆ ಕುಲಪತಿಗಳ ನುಡಿಯನ್ನು ಸಹ ಬರೆದುಕೊಟ್ಟು ಶುಭ ಹಾರೈಸಿದ್ದಾರೆ. ಇವರಿಗೆ ಗೌರವ ಪೂರ್ವಕ ಕೃತಜ್ಞತೆಗಳು. ನಮ್ಮ ಎಲ್ಲಾ ಕೆಲಸ ಕಾರ್ಯಗಳಿಗೆ ಬೆಂಬಲ ಸೂಚಿಸುವುರ ಮೂಲಕ ಸದಾ ನಮ್ಮನ್ನು ಪ್ರೋತ್ಸಾಹಿಸುವ ಸನ್ಮಾನ್ಯ ಕುಲಸಚಿವರಾದ ಪ್ರೊ. ಆರ್ ಶಿವಪ್ಪನವರಿಗೆ ವಂದನೆಗಳು ಸಲ್ಲಬೇಕು.

ಅಂದವಾಗಿ ಮುದ್ರಿಸುವ ಜವಬ್ದಾರಿಯನ್ನು ಹೊತ್ತಿರುವ ಮುದ್ರಣಾಲಯದ ನಿರ್ದೇಶಕರಾದ ಡಾ. ಎಸ್ ಸತೀಶ್ ಮತ್ತು ಸಿಬ್ಬಂಧಿವರ್ಗದವರಿಗೆ ವಂದನೆಗಳು. ಮುದ್ರಣಗೊಂಡ ಕೃತಿಗಳನ್ನು ಮಾರಾಟ ಮಾಡುವುದರ ಮೂಲಕ ಸಹಕಾರ ನೀಡುತ್ತಿರುವ ಪ್ರಸಾರಾಂಗದ ನಿರ್ದೇಶಕರಿಗೆ ವಂದನೆಗಳು. ತಪ್ಪಿಲ್ಲದಂತೆ ಡಿ.ಟಿ.ಪಿ ಮಾಡಿಕೊಟ್ಟ ಶ್ರೀಮತಿ ಮಂಜುಳ ಮುರಳಿಯವರಿಗೆ ವಂದನೆಗಳು. ನಮ್ಮ ಎಲ್ಲಾ ಕೆಲಸ ಕಾರ್ಯಗಳಲ್ಲಿ ಸಕ್ರಿಯವಾಗಿ ಸಹಕಾರ ನೀಡಿದ ಪ್ರಾಚ್ಯವಿದ್ಯಾ ಸಂಶೋಧನಾಲಯದ ಸಿಬ್ಬಂದಿ ವರ್ಗದವರಿಗೆ ಕೃತಜ್ಞತೆಗಳು ಸಲ್ಲಬೇಕು.

ಅಂತಿಮವಾಗಿ ಈ ಗ್ರಂಥದಲ್ಲಿ ಶ್ರೀಮುಮ್ಮಡಿ ಕೃಷ್ಣರಾಜಒಡೆಯರ್ ಅವರ ಬದುಕು–ಬರಹ ಸಾಧನೆಗಳ ಸಮಗ್ರ ಚಿತ್ರಣ ಇದೆ ಎಂದು ಹೇಳಲಾರೆ. ಈ ಮೇರು ಸದೃಶ ವ್ಯಕ್ತಿಯ ಬಗ್ಗೆ ಮತ್ತಷ್ಟು ಸಂಶೋಧನೆಗಳು ನಡೆಯಬೇಕೆಂಬುದಂತು ಸತ್ಯ

**ಎಸ್ ಶಿವರಾಜಪ್ಪ**

# ಪೀಠಿಕೆ

ವಿಜಯನಗರ ಸಾಮ್ರಾಜ್ಯದ ಅನಂತರ ಕರ್ನಾಟಕದ ಅರಸೊತ್ತಿಗೆಯನ್ನು ಪ್ರಭಾವಶಾಲಿಯಾಗಿ ಮುಂದುವರಿಸಿದ ಕೇಂದ್ರಗಳಲ್ಲಿ ಕೆಳದಿಯಂತೆಯೇ ಮೈಸೂರು ಮಹಾಸಂಸ್ಥಾನವು ಪ್ರಮುಖವಾದುದು. 1399ರ ಸಮಯದಲ್ಲಿ ಉತ್ತರ ಭಾರತದ ಕಡೆಯಿಂದ ಯದುವಂಶದ ಯದುರಾಯ, ಕೃಷ್ಣರಾಯ ಎಂಬ ಸಹೋದರರು ದಕ್ಷಿಣ ಕಡೆಗೆ ಬಂದರು. ವಿಜಯನಗರದಿಂದ ಮೇಲುಕೋಟೆಯ ಮಾರ್ಗವಾಗಿ ಕಾವೇರಿ ನದಿಯನ್ನು ದಾಟಿ ಮೈಸೂರಿನತ್ತ ಬಂದರು. ಅಲ್ಲಿ ಆಳುತ್ತಿದ್ದ ಪಾಳೆಗಾರ ವಂಶಕ್ಕೆ ಮಾರನಾಯಕ ಎಂಬುವನು ಹಿಂಸೆ ನೀಡುತ್ತಿದ್ದನು. ಇದನ್ನು ತಿಳಿದ ಯದುರಾಯ, ಕೃಷ್ಣರಾಯರು ಇವರ ಸಹಾಯಕ್ಕೆ ಮುಂದಾದರು. ಅನಂತರ ದಿನಕಳೆದಂತೆ ಮಾರನಾಯಕನ ಅಂತ್ಯವಾಯಿತು.

ಚಾಮರಾಜನ ಮಗಳನ್ನು ಯದುರಾಯರು ಮದುವೆಯಾಗಿ ಮೈಸೂರಿನಲ್ಲಿ ಯದುವಂಶಕ್ಕೆ ಮೂಲ ಪುರುಷರಾದರು. ಈ ಎಲ್ಲ ಕಾರ್ಯದಲ್ಲಿ ಮೊದಲಿಂದಲೂ ಈ ವಂಶದ ಗುರುಗಳ ಜಂಗಮರೊಬ್ಬರು, ತಮ್ಮ ತಪಶಕ್ತಿಯ ನೆರವನ್ನಿತ್ತುದರಿಂದ, ಯದುರಾಯರು ರಾಜರಾದಾಗ ಅವರ ಸ್ಮರಣಾರ್ಥ 'ಒಡೆಯರು' ಎಂಬ ಅಂಕಿತವನ್ನು ತಮ್ಮ ಹೆಸರಿನ ಜೊತೆಯಲ್ಲಿ ಸೇರಿಸಿಕೊಂಡರು. ಆವಂಶದ ಪರಂಪರೆಯಲ್ಲೆಲ್ಲಾ ಅದು ಉಳಿದುಕೊಂಡು ಬರಲು ಕಾರಣವಾಯಿತು.

1399ರಲ್ಲಿ ಯದುರಾಯರಿಗೆ ಪಟ್ಟಾಭಿಷೇಕವಾಯಿತು. ತಮ್ಮನಾದ ಕೃಷ್ಣರಾಯನಿಗೂ ಯದುರಾಯರು ಮದುವೆ ಮಾಡಿ ಕಾರಗಳ್ಳಿಗೆ ಆತನನ್ನು ಅಧಿಪತಿಯನ್ನಾಗಿ ಮಾಡಿದರು. 1408ರಲ್ಲಿ ಯದುರಾಯರಿಗೂ ದೇವಾಜಮ್ಮಣ್ಣಿಯವರಿಗೂ ಪುತ್ರೋತ್ಸವವಾಯಿತು. ಆತನಿಗೆ ಬೆಟ್ಟದ ಚಾಮರಾಜ ಒಡೆಯರ ಎಂದು ನಾಮಕರಣ ಮಾಡಿದರು.

1423ರವರೆಗೂ ಆಳಿದ ಯದುರಾಯರು ಮಗನಿಗೆ ಪಟ್ಟಾಭಿಷೇಕ ಮಾಡಿ ಆದೇ ವರ್ಷ ಕಾಲವಾದರು. ಚಾಮರಾಜ ಒಡೆಯರು 1423 ರಿಂದ 1459 ರವರೆಗೆ ಆಳಿದರು. ಆನಂತರ ಇವರ ಪುತ್ರ ತಿಮ್ಮರಾಜ ಒಡೆಯರು ಪಟ್ಟಕ್ಕೆ ಬಂದರು. 1478 ರವರೆಗೆ ಆಡಳಿತ ನಡೆಸಿ, ಇವರ ಹಿರಿಯ ಮಗ ಚಾಮರಾಜ ಒಡೆಯರು ಆಡಳಿತ 1513ರವರೆಗೂ ನಡೆಯಿತು. ಅವರ ಮಗ ಹಿರಿಯ ಬೆಟ್ಟದ ಚಾಮರಾಜ ಒಡೆಯರು 1553ರವರೆಗೂ ರಾಜನಾಗಿದ್ದರು. ಇವರ ಮಗ ತಿಮ್ಮರಾಜ ಒಡೆಯರು. ಅನಂತರ ಬೋಳ, ಬೋಳ ಚಾಮರಾಜ ಒಡೆಯರು, ಬೆಟ್ಟದ ಚಾಮರಾಜ ಒಡೆಯರು ಕ್ರಮವಾಗಿ ಆಳಿದರು. ಅನಂತರ ಬಂದವರೇ ರಾಜ ಒಡೆಯರು. ರಾಜ ಒಡೆಯರು 1578ರಲ್ಲಿ ಪಟ್ಟಾಭಿಷಿಕ್ತರಾದರು. ಈ ವಂಶದ ಮೊದಲನೆಯ ದೀರ್ಘಕಾಲ ಆಳಿದ ರಾಜರೆಂದು ಇವರನ್ನು ಹೇಳಬಹುದು. 40 ವರ್ಷಗಳ ಕಾಲ ಇವರ ಆಳ್ವಿಕೆ ನಡೆಯಿತು ಅಲ್ಲಿಯತನಕ ಮೈಸೂರು ವಂಶ 33 ಹಳ್ಳಿಗಳಿಂದ ಮತ್ತು 300 ಜನ ಸೈನಿಕರಿಂದ ಮಾತ್ರ ಕೂಡಿತ್ತು ಇವರ ಕಾಲದಲ್ಲಿ ಆಡಳಿತ ವ್ಯಾಪ್ತಿ ಹೆಚ್ಚಾಯಿತು. ಅಕ್ಕಿ ಹೆಬ್ಬಾಳು ಸೋಸಲೆ, ಯಳಂದೂರು ಮುಂತಾದ ಸುತ್ತಮುತ್ತಲ ಪಾಳೆಯಗಾರರನ್ನು ಜಯಿಸಿ ರಾಜ್ಯವನ್ನು ವಿಸ್ತರಿಸಿದರು. ಶ್ರೀರಂಗಪಟ್ಟಣ, ಮೈಸೂರು, ಮೇಲುಕೋಟೆಗಳಲ್ಲಿ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿದರು.

ರಾಜ ಒಡೆಯರು 1610ರಲ್ಲಿ ತಮ್ಮ ರಾಜಧಾನಿಯನ್ನು ಮೈಸೂರಿನಿಂದ ಶ್ರೀರಂಗಪಟ್ಟಣಕ್ಕೆ ಬದಲಾಯಿಸಿ ಸಿಂಹಾಸನರೋಹಣವನ್ನು ಮಾಡಿದರು. ಇದನ್ನು ಧರ್ಮರಾಯನ ಸಿಂಹಾಸನವೆಂದು ಹೇಳುವ ರೂಢಿಯಿತ್ತು. ಅಲಮೇಲಮ್ಮನು ಪತಿಯೊಡನೆ ಮಾಲಂಗಿಗೆ ಹೋಗುವಾಗ, ರಂಗನಾಯಕಿ ಅಮ್ಮನವರ ಅಲಂಕಾರಕ್ಕೆ ಬೇಕಾಗುತ್ತಿದ್ದ ಒಡವೆಗಳನ್ನು ತೆಗೆದುಕೊಂಡು ಹೋಗಿದ್ದಳೆಂದೂ, ಅವನ್ನು ತೆಗೆದುಕೊಡುವಂತೆ ರಾಜ ಒಡೆಯರು ಹೇಳಿ ಆ ಒಡವೆಗಳನ್ನು ಕಟ್ಟಿಕೊಂಡು ರಾಜ ಒಡೆಯರ ವಂಶಕ್ಕೆ ಶಾಪವನ್ನು ಕೊಟ್ಟು ಮಾಲಂಗಿಯ ಮಡುವಿನಲ್ಲಿ ಬಿದ್ದು ಸತ್ತಳೆಂದೂ ಕಥೆ ಇದೆ. ಮೈಸೂರು ಅರಮನೆಯ ಅನೇಕ ಪರಂಪರೆಗಳಿಗೆ ರಾಜ ಒಡೆಯರೇ ಪ್ರವರ್ತಕರೆಂದು ಹೇಳಬಹುದು. ನವರಾತ್ರಿಯ ಉತ್ಸವವನ್ನು ವಿಶೇಷ ವಿಜೃಂಭಣೆಯಿಂದ ಆಚರಿಸುವಂತಾದುದು ಇವರ ಕಾಲದಿಂದ. ಧರ್ಮ ಕಾರ್ಯಗಳ ಕಡೆ ಇವರು ವಿಶೇಷ ಗಮನವನ್ನು ಕೊಟ್ಟರು ಶ್ರೀ ಚಾಮುಂಡೇಶ್ವರಿ, ನಂಜನಗೂಡಿನ ಶ್ರೀಕಂಠೇಶ್ವರಸ್ವಾಮಿ ದೇವಸ್ಥಾನ, ಮೈಸೂರು ಲಕ್ಷ್ಮೀರಮಣಸ್ವಾಮಿ, ಶ್ರೀರಂಗಪಟ್ಟಣ ರಂಗನಾಥಸ್ವಾಮಿ, ಮೇಲುಕೋಟೆಯ ಚೆಲುವರಾಯಸ್ವಾಮಿ ಮುಂತಾದ ದೇವಾಲಯಗಳನ್ನು ನಿರ್ಮಿಸಿದರು.' ನಂಜನಗೂಡು, ರಾಮನಾಥಪುರ,

ತಿರುವಕೂಡಲು, ಎಡತೊರೆ ಮುಂತಾದ ಕಡೆಗಳಲ್ಲಿ ನದಿಗೆ ಸೋಪಾನಗಳನ್ನು ನಿರ್ಮಿಸಿದ್ದಾರೆ. ಜತೆಗೆ ಅಗ್ರಹಾರಗಳನ್ನು ನಿರ್ಮಿಸಿದರು. ಅರಮನೆಯಲ್ಲಿ ನಡೆಯುವ ನಿತ್ಯ ಕಟ್ಟಲೆಯ ಊಳಿಗವನ್ನು ವ್ಯವಸ್ಥೆಗೊಳಿಸಿದರು ಸಂಚಿಯ ಊಳಿಗ ಕನ್ನಡಿಯ ಪಡಿಗರ ಊಳಿಗ, ಕುಂಚದ ಊಳಿಗ, ಚಾಮರದ ಊಳಿಗ, ಹಾಸಿಗೆ ಊಳಿಗ ಮುಂತಾದ ಕೆಲಸಗಳಿಗಾಗಿ ಒಬ್ಬೊಬ್ಬ ಸೇವಕನನ್ನೂ ಇವರ ಮೇಲ್ವಿಚಾರಣೆಗಾಗಿ ಒಟ್ಟು ಇಬ್ಬರು ಕರಣೀಕರನ್ನು ನೇಮಿಸಿದರು. ರಾಜಒಡೆಯರ ಮೊಮ್ಮಗ ಚಾಮರಾಜ ಒಡೆಯರಿಗೆ ರಾಜ ಒಡೆಯರ ನಂತರ ಪಟ್ಟಾಭಿಷೇಕವಾಯಿತು. 1617ರಲ್ಲಿ ಇವರು ತಲಗೂಡು, ಕೆರೆಗೋಡು, ಮಳವಳ್ಳಿ, ಚನ್ನಪಟ್ಟಣ, ಬೆಳ್ಳೂರು, ನಾಗಮಂಗಲ, ಚನ್ನರಾಯಪಟ್ಟಣ ಮುಂತಾದ ಊರುಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಧರ್ಮ ಕಾರ್ಯಗಳಿಗೆ ಉದಾರದಾನ ನೀಡಿದರು. ಕೆರೆ ಕಾಲುವೆ, ಸೇತುವೆಗಳನ್ನು ಕಟ್ಟಿಸಿ ಬಡವರಿಗೆ ಭಾಗ್ಯಜ್ಯೋತಿಯಾದರು. ವಿದ್ಯಾಭ್ಯಾಸಕ್ಕೆ ಬಹಳ ಪ್ರೋತ್ಸಾಹ ದೊರೆಯಿತು. ಆಗ ಕನ್ನಡ ಮತ್ತು ಸಂಸ್ಕೃತದಲ್ಲಿ ಅನೇಕ ಗ್ರಂಥಗಳು ರಚನೆಗೊಂಡವು. ಅವುಗಳಲ್ಲಿ ಬಹಳ ಮುಖ್ಯವಾದುವುಗಳೆಂದರೆ

ಶ್ರೀ ರಾಮಾಯಣ ಗ್ರಂಥಕ್ಕೆ "ಚಾಮರಾಜೋಕ್ತಿ ವಿಲಾಸ" ಎಂಬ ಹೆಸರಿನಲ್ಲಿ ಕನ್ನಡ ಟೀಕೆಯನ್ನು ಬರೆಸಿದರು. ಇವರು 1637ರಲ್ಲಿ ಸ್ವರ್ಗಸ್ಥರಾದರು.

ಆನಂತರ ರಾಜ ಒಡೆಯರ ಮಗ ' ಎರಡನೇ ರಾಜ ಒಡೆಯರು ಪಟ್ಟಾಭಿಷಿಕ್ತರಾದರು. ರಾಜ ಒಡೆಯರಿಗೆ ನರಸರಾಜ ಒಡೆಯ ಮತ್ತು ಎರಡನೆಯ ರಾಜ ಒಡೆಯ ಎಂಬ ಇಬ್ಬರು ಮಕ್ಕಳು ಮತ್ತು ರಣಧೀರ ಕಂಠೀರವ ನರಸರಾಜನ ಒಡೆಯರೆಂಬ ತಮ್ಮನೂ ಇದ್ದರು. ಮೊದಲನೆ ಮಗನಾದ ನರಸರಾಜನ ಮಗ ಚಾಮರಾಜ, ಆನಂತರ ಎರಡನೆ ರಾಜ ಒಡೆಯರು ಅಧಿಕಾರಕ್ಕೆ ಬಂದರು. 2ನೇ ರಾಜ ಒಡೆಯರಿಗೂ ಮಕ್ಕಳಿಲ್ಲದಿದ್ದುದರಿಂದ 1ನೇ ರಾಜ ಒಡೆಯರ ತಮ್ಮ ರಣಧೀರ ಕಂಠೀರವ ನರಸರಾಜ ಒಡೆಯರು 1638 ರಲ್ಲಿ ಸಿಂಹಾಸನವನ್ನೇರಿದರು. ಇವರು ಶಿಂಗಾನೆಲ್ಲೂರು, ತುರುವೆಕೆರೆ, ಹಂಪಾಪುರ, ಬೆಟ್ಟದಪುರ, ಕಿತ್ತೂರು, ಹೆಬ್ಬೂರು, ಚೆನ್ನಗಿರಿ, ಬಸವಪಟ್ಟಣ ಹೊಸೂರು ಮೊದಲಾದುವನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಬಿಜಾಪುರದ ಸರದಾರರನ್ನು ಎದುರಿಸಿ ಜಯಗಳಿಸಿದರು. ಇದರಿಂದ ಮೈಸೂರು ರಾಜ್ಯ ವಿಸ್ತಾರವಾಗಿ ಬೆಳೆಯಿತು. ಕೋಟೆಯನ್ನೂ, ಒಂದು ಅರಮನೆಯನ್ನೂ ಕಟ್ಟಿಸಿದರು. ಅನೇಕ ದೇವಾಲಯಗಳನ್ನೂ, ಅಗ್ರಹಾರಗಳನ್ನೂ, ಕೆರೆ ಕಟ್ಟೆಗಳನ್ನು, ಸೇತುವೆಗಳನ್ನು ನಿರ್ಮಿಸಿದ ಕೀರ್ತಿ ಇವರದು. ಇವರ ಕಾಲದಲ್ಲಿ ಸಾಹಿತ್ಯ ಮತ್ತು ಕಲೆಗಳಿಗೂ ಇವರಿಂದ ಹೆಚ್ಚಿನ ಪ್ರೋತ್ಸಾಹ ದೊರೆಯಿತು. ಇವರ ಆಶ್ರಯದಲ್ಲಿ ಭಾಸ್ಕರನು "ಬೇಹಾರ ಗಣಿತ' ತಿಮ್ಮರಸನು ಮಾರ್ಕಂಡೇಯ

ರಾಮಾಯಣ ಮತ್ತು ಗೋವಿಂದವೈದ್ಯನು ಕಂಠೀರವ ನರಸರಾಜ ವಿಜಯ ಈ ಗ್ರಂಥಗಳನ್ನು ಬರೆದರು. ರಾಜ ಒಡೆಯರ ಮತ್ತೊಬ್ಬರ ತಮ್ಮ ಮುಪ್ಪಿನ ದೇವರಾಜ ಒಡೆಯರ ಮಗ 1659 ರಲ್ಲಿ ಅಧಿಕಾರಕ್ಕೆ ಬಂದರು. ಚಿಕ್ಕನಾಯಕನಹಳ್ಳಿ, ಹುಲಿಯೂರುದುರ್ಗ ಮುಂತಾದ ಊರುಗಳನ್ನು ಗೆದ್ದು, ಶಿವಪ್ಪನಾಯಕನ ಮುತ್ತಿಗೆಯಿಂದ ಶ್ರೀರಂಗಪಟ್ಟಣವನ್ನು ರಕ್ಷಿಸಿದರು. ಇವರ ಕಾಲದಲ್ಲಿಯೇ ಚಾಮುಂಡಿಬೆಟ್ಟದ ಮಧ್ಯದಲ್ಲಿರುವ ದೊಡ್ಡಬಸವನನ್ನು ನಿರ್ಮಿಸಲಾಯಿತು. ದೇವಾಲಯಗಳ ಜೀರ್ಣೋದ್ಧಾರ, ದಾನ ದತ್ತಿಗಳನ್ನು ಉದಾರವಾಗಿ ನೀಡಿ ಜನಪ್ರಿಯರಾದರು.

1827ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಸಾವಿರ ವರ್ಷಕ್ಕೂ ಹಿಂದಿನ ಹಿನ್ನೆಲೆಯಿರುವ ಉಮಾ ಮಹೇಶ್ವರಿ ದೇವಸ್ಥಾನದ ಜೀರ್ಣೋದ್ಧಾರ ಮಾಡಿ ಪುರಾತನ ಇತಿಹಾಸವಿದ್ದು ಈ ಮಹಾದ್ವಾರದ ಮೇಲೆ ದೊಡ್ಡ ಗೋಪುರವನ್ನು ಕಟ್ಟಿಸಿದರು. ಸಿಂಹವಾಹನ ಒಂದನ್ನು ಮರದಲ್ಲಿ ನಿರ್ಮಿಸಿ ಕೊಡುಗೆ ನೀಡಿದರು. ಸಿಂಹ ವಾಹನವನ್ನು ರಥೋತ್ಸವ ಸಂದರ್ಭದಲ್ಲಿ ಬಳಸಲಾಗುತ್ತಿದ್ದು, ಅದರಲ್ಲಿ ದೇವಿಯ ಉತ್ಸವ ಮೂರ್ತಿಯನ್ನಿಟ್ಟು ರಥವನ್ನು ಎಳೆಯಲಾಗುತ್ತದೆ.

ಶ್ರೀ ಚಾಮುಂಡೇಶ್ವರಿ ದೇವಸ್ಥಾನ, ಹೆಬ್ಬಾಗಿಲು, ಪ್ರವೇಶ, ದ್ವಾರ, ನವರಂಗ, ಅಂತರಾಳ, ಗರ್ಭಗೃಹ, ಮತ್ತು ಪ್ರಕಾರಗಳನ್ನು ಒಳಗೊಂಡಿದೆ. ಏಳು ಅಂತಸ್ತುಗಳ ಗೋಪುರವು 19ನೇ ಶತಮಾನದಲ್ಲಿ ನಿರ್ಮಿತವಾಗಿದ್ದು, ಪಿರಮಿಡ್ ಆಕಾರದಲ್ಲಿ ದ್ರಾವಿಡ ಶೈಲಿಯಲ್ಲಿ ರೂಪುಗೊಂಡಿದೆ. ಶಿಖರದ ಮೇಲೆ ಏಳು ಚಿನ್ನದ ಲೇಪಿತ ಕಲಶಗಳು ಇವೆ. ಗರ್ಭಗುಡಿಯಲ್ಲಿ ಎಂಟು ಭುಜಗಳನ್ನು ಹೊಂದಿರುವ ಮಹಿಷಮರ್ಧಿನಿ ಚಾಮುಂಡೇಶ್ವರಿ ವಿರಾಜಮಾನವಾಗಿದೆ. ವಿಗ್ರಹಕ್ಕೆ ಬಹಳಷ್ಟು ಪುರಾತನ ಇತಿಹಾಸವಿದ್ದು, ಈ ಶಿಲಾಮೂರ್ತಿಯನ್ನು ಮಾರ್ಕಂಡೇಯ ಋಷಿಗಳು ಸ್ಥಾಪಿಸಿದರೆಂದು ಸ್ಥಳ ಪುರಾಣ ಹೇಳುತ್ತದೆ.

ಚಾಮುಂಡೇಶ್ವರಿ ದೇವಸ್ಥಾನದ ಅಭಿವೃದ್ಧಿಯಲ್ಲಿ ಮೈಸೂರು ಅರಸರ ಕೊಡುಗೆ ಅಪಾರವಾದುದು. 1799ರಲ್ಲಿ ಅಧಿಕಾರಕ್ಕೆ ಬಂದ ಮೈಸೂರು ಅರಸರು ಚಾಮುಂಡೇಶ್ವರಿ ಭಕ್ತರಾಗಿದ್ದು, ಶ್ರದ್ಧಾಭಕ್ತಿಯಿಂದ ದೇವಸ್ಥಾನವನ್ನು ಅಭಿವೃದ್ಧಿಪಡಿಸಿ ಧಾರ್ಮಿಕ ಕ್ಷೇತ್ರದ ಮಹತ್ವವನ್ನು ಹೆಚ್ಚಿಸಿದ್ದಾರೆ. ಚಾಮುಂಡಿಬೆಟ್ಟವು ಸಮುದ್ರಮಟ್ಟಕ್ಕಿಂತ ಸುಮಾರು 3489 ಅಡಿ ಎತ್ತರದಲ್ಲಿ ಸುಂದರ ಪ್ರಕೃತಿ ಮಡಿಲಲ್ಲಿದೆ. ಮೈಸೂರಿನ ದೊಡ್ಡ ದೇವರಾಜ ಒಡೆಯರ್ ಅವರು ಭಕ್ತಾದಿಗಳ ಅನುಕೂಲಕ್ಕೆ 1101 ಮೆಟ್ಟಿಲುಗಳನ್ನು ನಿರ್ಮಿಸಿ 700ನೇ ಮೆಟ್ಟಿಲ ಬಳಿ ಬೃಹತ್ ನಂದಿ ವಿಗ್ರಹವನ್ನು ಸ್ಥಾಪಿಸಿದ್ದಾರೆ. ಈ ಚಾಮುಂಡೇಶ್ವರಿಗೆ ಮೈಸೂರಿನ ರಾಜವಂಶಸ್ಥರು ಹಲವಾರು

ಬೆಲೆಬಾಳುವ ಹಾಗೂ ಅಪರೂಪದವಾದ ಕಾಣಿಕೆಗಳನ್ನು ಶ್ರದ್ಧಾಭಕ್ತಿಯಿಂದ ಸಮರ್ಪಿಸಿದ್ದಾರೆ. ರಾಜ್ಯದಲ್ಲಿ ಏನೇ ಕಷ್ಟ-ಸಂಕಷ್ಟಗಳು ಬಂದೊದಗಿದರೂ ಇದರ ನಿವಾರಣೆಗಾಗಿ ಒಡೆಯರ್ ವಂಶಸ್ಥರು ಶ್ರೀ ಚಾಮುಂಡೇಶ್ವರಿ ದೇವಿ ಸನ್ನಿಧಿಯಲ್ಲಿ ಪ್ರಾರ್ಥನೆ ಸಲ್ಲಿಸಿ ಅದಕ್ಕೆ ಪರಿಹಾರ ಕಂಡುಕೊಳ್ಳುತ್ತಿದ್ದರು. ಯಾವುದೇ ಜಾತ್ರೆವರ್ಧಂತಿ, ಚಿನ್ನದ ಪಲ್ಲಕ್ಕಿ ಉತ್ಸವ ಮುಂತಾದವುಗಳಿಗೆ ರಾಜವಂಶಸ್ಥರ ಉಪಸ್ಥಿತಿ ಇರಲೇಬೇಕು.

ಗರ್ಭಗುಡಿಗೆ ಮುಮಚೆ ಇರುವ ಅಂತರಾಳದ ಎಡಭಾಗದಲ್ಲಿ ಭಕ್ತನ ದಿರಿಸು ತೊಟ್ಟಿರುವ ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರು ಆರು ಅಡಿ ಎತ್ತರದ ಸುಂದರ ಭಕ್ತ ವಿಗ್ರಹ ಕಾಣಬಹುದು. ಮಹಾರಾಜರು ತಮ್ಮ ಮೂವರು ಪತ್ನಿಯರೊಂದಿಗೆ ದೇವಿಗೆ ಕೈಮುಗಿದು ನಿಂತಿದ್ದಾರೆ. ಮಹಾರಾಜರ ಎಡಭಾಗದಲ್ಲಿ ರಮಾವಿಲಾಸ, ಲಕ್ಷ್ಮೀವಿಲಾಸ ಮತ್ತು ಕೃಷ್ಣವಿಲಾಸ ಮಹಾರಾಣಿಯರು ಇದ್ದಾರೆ. ಈ ಶಿಲಾ ವಿಗ್ರಹಗಳ ಪಾದದ ಬಳಿಯ ಪೀಠದ ಮೇಲೆ ಇವರ ಹೆಸರುಗಳನ್ನು ಕೆತ್ತಲಾಗಿದೆ. ದೇವಾಲಯದ ಅರ್ಚಕರು ತಾಯಿ ಸ್ವರೂಪದ ಶಿಲಾ ಪ್ರತಿಮೆಯನ್ನು ಪ್ರತಿ ದಿನ ಅಲಂಕರಿಸಿ ಪೂಜೆ ಮಾಡುತ್ತಾರೆ. ಮಮಡ್ಯ ಜಿಲ್ಲೆಯ ಪಾಂಡವಪುರ ತಾಲೂಕಿನ ಮೇಲೂಕೋಟೆಯ ಚೆಲುವನಾರಾಯಣ ಸ್ವಾಮಿಗೆ ಈ ಮುಮ್ಮಡಿಕೃಷ್ಣರಾಜ ಒಡೆಯರವರು ವಜ್ರದ ಕಿರೀಟವನ್ನು ಮಾಡಿಸಿಕೊಟ್ಟಿದ್ದಾರೆ. ಚಾಮರಾಜನಗರ ಜಿಲ್ಲೆಯ ಹನೂರು ತಾಲೂಕು ಮಲೆಯಮಾದೇಶ್ವರ ದೇವಸ್ಥಾನಕ್ಕೆ ಚಿನ್ನದ ಕೊಳಗವನ್ನು ಸಹ ಮಾಡಿಸಿಕೊಟ್ಟದ್ದು ಶ್ರೀ ಮಹದೇಶ್ವರರ ಪರಮ ಭಕ್ತರಾಗಿ ಭಕ್ತರ ಅನುಕೂಲಕ್ಕಾಗಿ ಎಲ್ಲಾ ಸೌಕರ್ಯಗಳನ್ನು ಮುಕ್ತಕಂಠದಿಂದ ಅವರೇ ಕೇಳಿರುವುದು ಅನುಕರಣೀಯವಾದುದು ಜೊತೆಗೆ ಚಾಮರಾಜನಗರದ ಹೃದಯ ಭಾಗದಲ್ಲಿರುವ ಚಾಮರಾಜೇಶ್ವರ ದೇವಸ್ಥಾನವನ್ನು ನಿರ್ಮಿಸಿ ಇದನ್ನು ಅವರ ತಂದೆಯವರಿಗೆ ಸಮರ್ಪಿಸುತ್ತಿರುವುದು ಶ್ಲಾಘನೀಯವಾದುದು.

ಆನಂತರ ಇವರ ಹಿರಿಯ ಪುತ್ರ ಚಿಕ್ಕ ದೇವರಾಜ ಒಡೆಯರು ಪಟ್ಟಾಭಿಷಿಕ್ತರಾದರು. ಚಿಕ್ಕದೇವರಾಜ ಒಡೆಯರು 1673 ರಿಂದ 1704ರ ತನಕ ರಾಜ್ಯಭಾರ ನಡೆಸಿ ಮೈಸೂರು ಅರಸರಲ್ಲೆಲ್ಲಾ ಬಹು ಪ್ರಸಿದ್ಧರಾದರು. ಕನ್ನಡ ಸಾಹಿತ್ಯಕ್ಕೆ ಇವರು ನೀಡಿದ ಪ್ರೋತ್ಸಾಹ, ಸಾಹಿತ್ಯ ಚರಿತ್ರೆಯಲ್ಲಿ ಇವರಿಗೆ ವಿಶಿಷ್ಟ ಗೌರವವನ್ನು ತಂದುಕೊಟ್ಟಿತು. ತಮ್ಮ ಮೇಲೆ ದಂಡೆತ್ತಿ ಬಂದ ಮದುರೆ ನಾಯಕನನ್ನು ಎದುರಿಸಿ ಜಯಗಳಿಸಿ ಮರಾಠಿಗರನ್ನು ಹಿಮ್ಮೆಟ್ಟಿಸಿದರು. ಮಾಗಡಿ, ಬೇಲೂರು, ಸಕಲೇಶಪುರ ಮುಂತಾದ ಅನೇಕ ಸ್ಥಳಗಳನ್ನು ವಶಪಡಿಸಿಕೊಂಡರು. ವಿಶಾಲಾಕ್ಷ ಪಂಡಿತ, ತಿರುಮಲಯ್ಯಂಗಾರ್, ಷಡಕ್ಷರಯ್ಯ, ಚಿಕ್ಕುಪಾಧ್ಯಾಯ, ಲಿಂಗಣ್ಣಯ್ಯ

ಮುಂತಾದವರು ಇವರಿಗೆ ಮಂತ್ರಾಲೋಚನೆಯಲ್ಲಿ ನೆರವಾಗುತ್ತಿದ್ದರು. ಸಾಹಿತ್ಯ ಹಾಗೂ ಲಲಿತ ಕಲೆಗಳಿಗೆ ಇವರು ಹೆಚ್ಚು ಪ್ರೋತ್ಸಾಹ ಕೊಟ್ಟರು, ನಿಯಮಿತವಾದ ಹಣ ನಿತ್ಯವೂ ಖಜಾನೆಗೆ ಸಂದಾಯವಾದ ಹೊರತು ಆ ದಿನದ ಊಟವನ್ನೆ ಮಾಡುತ್ತಿರಲಿಲ್ಲ.

ಆದ್ದರಿಂದಲೇ ಇವರಿಗೆ ನವಕೋಟಿ ನಾರಾಯಣ ಎಂಬ ಬಿರುದು ಪ್ರಾಪ್ತವಾಯಿತು. ಕನ್ನಡ ಸಾಹಿತ್ಯಕ್ಕೆ ಇವರು ಕೊಟ್ಟ ಪ್ರೋತ್ಸಾಹವೇ ಇವರಿಗೆ ಗಣನೀಯವಾದ ಸ್ಥಾನವನ್ನು ತಂದುಕೊಟ್ಟಿತು. ಚಿಕ್ಕದೇವರಾಯ ಭಿನ್ನಪ, ಗೀತಗೋಪಾಲ ಮುಂತಾದ ಕೃತಿಗಳು ಇವರ ಹೆಸರಿನಲ್ಲಿ ಪ್ರಕಟಗೊಂಡಿವೆ. ಇವರ ಆಸ್ಥಾನದಲ್ಲಿ ಕವಿಗಳೊಡನೆ ಹೆಸರಿಸಬಹುದಾದರೆ ಚಿಕ್ಕುಪಾಧ್ಯಾಯ, ಕಾಮಂದಕ ನೀತಿ, ಶುಕ ಸಪ್ತತಿ, ದಿವ್ಯಸೂರಿ ಚರಿತ ಮತ್ತು ಯದುಗಿರಿ ಮಹಾತ್ಮೆ, ವೆಂಕಟಗಿರಿ ಮಹಾತ್ಮೆ, ಶ್ರೀರಂಗ ಮಹಾತ್ಮೆ ಮುಂತಾದ ಮಹಾತ್ಮೆ ಕೃತಿಗಳೇ ಅಲ್ಲದೆ ಭಗವದ್ಗೀತ ಟೀಕು, ಶೇಷಧರ್ಮ, ವಿಷ್ಣುಪುರಾಣ ಮೊದಲಾದವುಗಳನ್ನು ಬರೆದಿದ್ದಾರೆ. ತಿರುಮಲಾರ್ಯರು ಇವರ ಅಪ್ರತಿಮ ವೀರಚರಿತ್ರೆ ಇವೆ ಮುಂತಾದ ಕೃತಿಗಳು ತಿರುಮಲಾರಾರ್ಯರದು. ಇವರು ತಮ್ಮ ನಿಂಗಕಾರ್ಯ "ಮಿತ್ರಾವಿಂದ ಗೋವಿಂದ" ನಾಟಕದ ಕರ್ತೃ. ಸಂಚಿಯ ಹೊನ್ನಮ್ಮ ಹದಿಬದೆಯ ಧರ್ಮವನ್ನು, ಶೃಂಗಾರಮ್ಮ, ಪದ್ಮನೀಕಲ್ಯಾಣವನ್ನೂ ಬರೆದರು. ಇವರ ಆಸ್ಥಾನದಲ್ಲಿದ್ದರೂ ಇವರಿಂದ ಗೌರವವನ್ನು ಪಡೆದ ಕವಿ ಈ ಕಾಲದ ಕವಿಗಳಲಲ್ಲೇ ಸೀಮಾ ಪುರುಷರೆಂದರೆ ಷಡಕ್ಷರಿ. ಚಿಕ್ಕದೇವರಾಜರು ಸ್ವತಃ ಕನ್ನಡ ಸಾಹಿತ್ಯದ ಅಗ್ರಮಾನ್ಯ ವಿದ್ವಾಂಸರಾಗಿದ್ದುದಲ್ಲದೆ ಅಶ್ವಶಾಸ್ತ್ರ ಗಜಶಾಸ್ತ್ರ, ರತ್ನ ಪರೀಕ್ಷೆ ಮುಂತಾದ ಹತ್ತಾರು ವಿದ್ಯೆಗಳಲ್ಲಿ ಪ್ರಬುದ್ಧರಾಗಿದ್ದರು. ಇವರಿಗೆ ಹತ್ತು ಜನ ರಾಣಿಯರಿದ್ದರು. ಇಬ್ಬರು ಮಾತ್ರ ಮಕ್ಕಳಾದರು. ಒಬ್ಬ ಮಗ, ಮತ್ತೊಬ್ಬ ಮಗಳು. ಮಗ ಮೂಕನಾಗಿದ್ದು ಚಿಕ್ಕದೇವರಾಜರ ಆನಂತರ ಮೂಕ ಮಗನಿಗೆ ಪಟ್ಟಾಭಿಷೇಕವಾಯಿತು. ಇವರು 10 ವರ್ಷಗಳ ಕಾಲ ಆಡಳಿತ ನಡೆಸಿದರು. ಇವರ ಮಗ ದೊಡ್ಡ ಕೃಷ್ಣರಾಜ ಒಡೆಯರು ರಾಜರಾದರು. 1734 ರವರೆಗೂ ಆಡಳಿತ ನಡೆಸಿದರು. ಇವರಿಗೆ ಮಕ್ಕಳಿಲ್ಲದುದರಿಂದ ಅಂಕನಹಳ್ಳಿ ಚಾಮರಾಜ ಒಡೆಯರನ್ನು ರಾಣಿ ದತ್ತು ತೆಗೆದು ಕೊಂಡು ಅವರಿಗೆ ಪಟ್ಟಾಭಿಷೇಕ ಮಾಡಲಾಯಿತು.

ಆಡಳಿತದಲ್ಲಿ ಯಶಸ್ಸನ್ನು ಕಾಣಬೇಕಾಗಿದ್ದ ಇವರನ್ನು ಪ್ರಬಲವಾಗಿದ್ದ ದಳವಾಯಿ ದೇವರಾಯ ಎಂಬುವನು ಬಂಧಿಸಿ ಕಲ್ಯಾಳ ದುರ್ಗಕ್ಕೆ ಸಾಗಿಸಿದನು. ಇಮ್ಮಡಿ ಕೃಷ್ಣರಾಜ ಎಂಬ ಮತ್ತೊಬ್ಬನನ್ನು ದತ್ತು ತೆಗೆದುಕೊಂಡು ಅವರಿಗೆ

ಅಧಿಕಾರ ನೀಡಲಾಯಿತು. ದಳವಾಯಿ ದೇವರಾಜಯ್ಯ, ಸರ್ವಾಧಿಕಾರಿ ನಂಜರಾಜಯ್ಯ ಇವರು ಆಡಳಿತದ ಎಲ್ಲ ಸೂತ್ರಗಳನ್ನೆಲ್ಲಾ ಹಿಡಿದ್ದರು. ಒಮ್ಮೆನಂಜರಾಜಯ್ಯನು ಕೊಯಮತ್ತೂರಿನ ಕಡೆಯುದ್ಧಕ್ಕೆ ಹೋದಾಗ ನಿಜಾಮ್ ಉಲ್ ಮುಲ್ಕನ ಮಗ ಜನಾದ ನಜೀತ್ ಜಂಗನು ಮೈಸೂರನ್ನು ಆಕ್ರಮಿಸಿದನು. ಈ ಸಂದಿಗ್ಧ ಸಂದರ್ಭದಲ್ಲಿ ಮೈಸೂರು ಸೈನ್ಯದಲ್ಲಿದ್ದ ಶೂರ ತರುಣ ಹೈದರಾಲಿ ತನ್ನ ಪರಾಕ್ರಮವನು ತೋರಿಸಿದನು. ಹೈದರಾಲಿ ಸಾಮಾನ್ಯ ಯೋಧನಾಗಿದ್ದು ತನ್ನ ದಕ್ಷತೆ ಪರಾಕ್ರಮಗಳಿಂದ ಮುಂದೆ ಜನಪ್ರಿಯನಾದನು. ಇವನು ಮತ್ತು ಖಂಡೇರಾವ್ ಜತೆಯಲ್ಲಿ ಕೆಲಸ ಮಾಡುತ್ತಾ ಮೈಸೂರು ಸೈನ್ಯವನ್ನು ಸಶಕ್ತಗೊಳಿಸಲು ಶ್ರಮಿಸಿದ್ದರು. ಎರಡು ಬಾರಿ ಮರಾಠರು ಮೈಸೂರನ್ನು ಆಕ್ರಮಿಸಿದಾಗ ಹೈದರಾಲಿ ತೋರಿಸಿದ ಪರಾಕ್ರಮ ಅವನ ಪ್ರಭಾವವನ್ನು ಹೆಚ್ಚಿಸಿತು. ಇವನ ಪರಾಕ್ರಮಕ್ಕೆ ಮೆಚ್ಚಿ ನವಾಬನೆಂಬ ಬಿರುದನ್ನು ನೀಡಿ ಗೌರವಿಸಲಾಯಿತು. ಖಂಡೇರಾಯನಿಗೂ ಆತನಿಗೂ ಮನಸ್ತಾಪ ಉಂಟಾಗಿ ಆತನನ್ನು ಹೈದರ್ ನಿಗ್ರಹಿಸಿದನು. ಅನಂತರ ಮೈಸೂರು ರಾಜ್ಯದ ಆಡಳಿತ ಸೂತ್ರ ಪೂರ್ಣವಾಗಿ ಹೈದರಾಲಿಯ ಪಾಲಾಯಿತು.

ನೆಪಮಾತ್ರಕ್ಕೆ ರಾಜನಾಗಿದ್ದ 2ನೇ ಕೃಷ್ಣರಾಜ ಒಡೆಯರು ನಿಧನರಾದರು. ಆನಂತರ ಇವರ ಮಗ ನಂಜರಾಜ ಒಡೆಯರು ರಾಜರಾದರು. (1766 ರಿಂದ 1770) ರಾಜ್ಯದ ಅಧಿಕಾರವೆಲ್ಲಾ ಹೈದರಾಲಿಯ ಕೈ ಸೇರಿತು. 1770 ರಿಂದ 1776 ರವರೆಗೆ ಬೆಟ್ಟದ ಚಾಮರಾಜ ಒಡೆಯರು ಅಲ್ಲಿಂದ 1796 ರವರೆಗೆ. ಖಾಸಾ ಚಾಮರಾಜ ಒಡೆಯರೂ ಅಧಿಕಾರ ನಡೆಸಿದರು. ಇವರ ಪ್ರೀತಿ ಪಾತ್ರ ಮಗನೇ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರು. ಈ ಅವಧಿಯಲ್ಲಿ ಹೈದರನೇ ರಾಜ್ಯಾಡಳಿತ ನಡೆಸಿದನು. 1782 ರಲ್ಲಿ ಹೈದರ್ ಬೆನ್ನು ಫಣಿ ಎದ್ದು ಮೃತನಾಗಲು ಅವನ ಮಗ ಟಿಪ್ಪುಸುಲ್ತಾನ್ ಅಧಿಕಾರ ವಹಿಸಿಕೊಂಡ ಆಗ ಇಂಗ್ಲಿಷರಿಗೂ, ಟಿಪ್ಪುಸುಲ್ತಾನನಿಗೂ ಮತ್ತೆ ಮತ್ತೆ ಯುದ್ಧಗಳು ನಡೆದವು. ಇಂಗ್ಲೀಷರನ್ನು ದೇಶದಂದಲೇ ಹೊರದೂಡಬೇಕೆಂಬ ನಿರ್ಧಾರದಿಂದ ಟಿಪ್ಪು ಸುಲ್ತಾನ್ ಬ್ರಿಟಿಷರಿಗೆ ಸಿಂಹಸ್ವಪ್ನವಾಗಿದ್ದನು. 1799ರಲ್ಲಿ ಬ್ರಿಟಿಷರು ಶ್ರೀರಂಗಪಟ್ಟಣವನ್ನು ಆಕ್ರಮಿಸಿದರು. ಈ ಯುದ್ಧದಲ್ಲಿ ಟಿಪ್ಪುವಿನ ಅಂತ್ಯವಾಯಿತು. ಆಗ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಐದು ವರ್ಷ ವಯಸ್ಸಾಗಿತ್ತು.

ಬ್ರಿಟೀಷರು ಟಿಪ್ಪುವನ್ನು ಕೊಂದ ನಂತರ ತಮಗೆ ಯುದ್ಧದಲ್ಲಿ ಸಹಾಯ ಮಾಡಿದ ನಿಜಾಮ ಮತ್ತು ಮರಾಠರಿಗೆ ಕೊಡುವುದಕ್ಕಾಗಿ ಮೈಸೂರು ರಾಜ್ಯವನ್ನು ವಿಭಾಗಿಸಿದರು. ಉತ್ತರದ ಪ್ರಧಾನವಾದ ಕೆಲವು ಕೋಟೆಗಳು ಮರಾಠಿಗರಿಗೆ ಹೋದವು. ಉಳಿದ ಭಾಗವಾದ ಮೈಸೂರು ರಾಜ್ಯವನ್ನು 1799ರಲ್ಲಿ ಮುಮ್ಮಡಿ

ಕೃಷ್ಣರಾಜ ಒಡೆಯರ ಆಳ್ವಿಕೆಗೆ ಬಿಟ್ಟುಕೊಟ್ಟರು. ಆಗ ಅವರಿಗೆ ಐದು ವರ್ಷವಯಸ್ಸಿದ್ದರಿಂದ ದಿವಾನ್ ಪೂರ್ಣಯ್ಯನವರನ್ನು ರಕ್ಷಕರನ್ನಾಗಿಯೂ, ಮಂತ್ರಿಯನ್ನಾಗಿಯೂ ನೇಮಿಸಿದರು.

ರಾಜನ ನೇಮಕ ವಿಷಯದಲ್ಲಿ ಟಿಪ್ಪುವಿನ ಮಗನೇ ರಾಜನಾಗಲಿ ಎಂದು ಬಯಸಿದ ಪೂರ್ಣಯ್ಯನ ಬೇಡಿಕೆಯನ್ನು ತಿರಸ್ಕರಿಸಿ ಬ್ರಿಟೀಷರು ಮುಮ್ಮಡಿ ಕೃಷ್ಣರಾಜರನ್ನು ರಾಜರೆಂದು ಘೋಷಿಸಿದರು. ಮಂತ್ರಿಯ ನೇಮಕ ವಿಚಾರದಲ್ಲಿ ರಾಣಿಗೆ ಸ್ವಾತಂತ್ರ್ಯವನ್ನು ಕೊಡದೆ ತಾವೇ ಪೂರ್ಣಯ್ಯನನ್ನು ನೇಮಿಸಿದರು. ಆನಂತರ ಮುಮ್ಮಡಿ ಕೃಷ್ಣರಾಜರ ಆಳ್ವಿಕೆ ಚೆನ್ನಾಗಿ ನಡೆಯಿತು. ಆಗ ಕುಂಟ ನೆಪವೊಡ್ಡಿ ರಾಜ್ಯದ ಆಡಳಿತವನ್ನು ತಾವೇ ವಹಿಸಿಕೊಂಡರು. ಆಗ ಗೌರ್ನರ್ ಜನರಲ್ ಆಗಿದ್ದ ಲಾರ್ಡ್‌ವಿಲಿಯಂ ಬೆಂಟಿಂಕನು ಇಬ್ಬರು ಕಮೀಷನರನ್ನು ಆಡಳಿತಕ್ಕೆ ನೇಮಿಸಿದನು. ರಾಜರ ಪ್ರಯತ್ನಗಳೆಲ್ಲ ಸಫಲವಾಗದೆ 1868ರಲ್ಲಿ ಮೃತರಾದರು. ಇವರ ಕಾಲದಲ್ಲಿ ಶ್ರೀರಂಗಪಟ್ಟಣದ ಶ್ವೇತವರಾಹಸ್ವಾಮಿ ದೇವಾಲಯವನ್ನು ಮೈಸೂರಿನ ತ್ರಿಣೇಶ್ವರಸ್ವಾಮಿ ದೇವಾಲಯವೂ ಹೊಸ ರೂಪವನ್ನು ಪಡೆಯಿತು. ತಮ್ಮ ತಂದೆ–ತಾಯಿಗಳ ಸ್ಮರಣಾರ್ಥವಾಗಿ ಅರಿಕುಠಾರ ಎಂಬ ಊರನ್ನು ವಿಸ್ತರಿಸಿ ಅದಕ್ಕೆ ಚಾಮರಾಜನಗರ ಎಂಬ ಹೆಸರನ್ನಿಟ್ಟರು. ಇದರ ಕುರುವಾಗಿ ಚಾಮರಾಜೇಶ್ವರ ದೇವಾಲಯುವನ್ನು ಕಟ್ಟಿಸಿದರು. ಆಮುಚವಾಡಿಯಲ್ಲಿ ವೀರಭದ್ರೇಶ್ವರ ದೇವಾಲಯುವನ್ನು ಜೀರ್ಣೋದ್ಧಾರ ಮಾಡಿದರು. ಮೈಸೂರಿನಲ್ಲಿ ಜನರ ಉಪಯೋಗಕ್ಕಾಗಿ ಉಚಿತವಾದ ವೈದ್ಯಾಲಯಗಳನ್ನು ಮತ್ತು ಮೃಗಾಲಯ ಹಾಗೂ ಶಿವನಸಮುದ್ರದ ಬಳಿ ಕಾವೇರಿ ನದಿಗೆ ಲೋಕ ಪಾವನಿ ಅರ್ಕಾವತಿ ನದಿಗಳಿಗೆ ಸೇತುವೆ, ನಂಜನಗೂಡಿನ ಪಶ್ಚಿಮ ವಾಹಿನಿಯನ್ನು ನಿರ್ಮಾಣ ಮಾಡಿದರು. ಮೈಸೂರಿನ ಕಾರಂಜಿಕೆರೆ, ಲೋಕರಂಜನ ಮಹಲ್, ಜಗನ್ಮೋಹನ ಪ್ಯಾಲೆಸ್‌ಗಳನ್ನು ನಂಜಮಾಂಬ, ದೇವಿರಾಂಭ ಚೆಲುವಾಂಬ ಮುಂತಾದ ಹತ್ತಾರು ಅಗ್ರಹಾರಗಳು ಮೈಸೂರಿನಲ್ಲಿ ನಿರ್ಮಾಣಗೊಂಡವು.

## ಕವಿಜನಕಾಮಧೇನು ಮುಮ್ಮಡಿ ಕೃಷ್ಣರಾಜ ಒಡೆಯರು

ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ಕನ್ನಡ, ಸಂಸ್ಕೃತ ಸಾಹಿತ್ಯಕ್ಕೆ ಸಲ್ಲಿಸಿದ ಸೇವೆ ವಿಶಿಷ್ಟವಾದುದು, ಇವರ ಕನ್ನಡ, ಸಂಸ್ಕೃತದಲ್ಲಿ ಬರೆದು, ಬರೆಯಿಸಿ, ಪ್ರಚಾರಕ್ಕೆ ತಂದಷ್ಟು ಗದ್ಯ, ಪದ್ಯ, ಕಾವ್ಯ, ನಾಟಕಗಳನ್ನು ಶಾಸ್ತ್ರಗ್ರಂಥಗಳನ್ನು

ಬೇರೆ ಯಾವ ಕಾಲದ ಯಾವ ವಂಶದ ಕನ್ನಡದ ದೊರೆಗಳೂ ಪ್ರಚಾರಕ್ಕೆ ತರಲಿಲ್ಲ, ಇದರಿಂದ ಆ ಕಾಲದ ದೇಶಭಾಷಾ ಸಾಹಿತ್ಯದ ಒಲವು ನಿಲುವುಗಳ ಚಿತ್ರ ನಮಗೆ ದೊರೆಯುತ್ತದೆ. ಧರ್ಮ ಶ್ರದ್ಧೆ, ದೈವಭಕ್ತಿ, ಕಲಾಪ್ರೇಮ ಮುಂತಾದ ಕಲ್ಯಾಣಗುಣಗಳಿಂದ ವಿರಾಜಮಾನರಾದ ಒಬ್ಬ ಪ್ರಭು ಕನ್ನಡದ ಬಾವುಟವನ್ನು ಎತ್ತಿ ಹಿಡಿದು ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕವನ್ನು ಮೊಟ್ಟ ಮೊದಲು ಕನ್ನಡಕ್ಕೆ ಅನುವಾದಿಸಿಕೊಟ್ಟ ಕೀರ್ತಿ ಅವಿಸ್ಮರಣೀಯವಾದುದು ಒಟ್ಟಿನಲ್ಲಿ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ಕಾಲ, ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲೊಂದು ಗಮನಾರ್ಹವಾದ ಹಂತ ಸಾಹಿತ್ಯ ಚರಿತ್ರೆಯಲ್ಲೊಂದು ಗಣ್ಯವಾದ ಅಧ್ಯಾಯವೆಂದೇ ಹೇಳಬೇಕು.

ಮೈಸೂರು ಮಹಾಸಂಸ್ಥಾನದ ಸಾಂಸ್ಕೃತಿಕ ಇತಿಹಾಸದ ಧ್ರುವತಾರೆ ಶ್ರೀತತ್ತ್ವನಿಧಿಯ ರಚನೆಕಾರರಾದ ಶ್ರೀಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ಮಹಾಸಂಸ್ಥಾನಗಳಿಗೆ ಕವಿಜನಕಾಮಧೇನು 'ಕನ್ನಡದ ಭೋಜ' ಎಂಬ ಪ್ರಶಂಸೆಗೆ ಭಾಜನರಾಗಿದ್ದರು ಮುಮ್ಮಡಿಯವರು ಕೊಡುಗೈದಾನಿ, ಧಾರಾನಗರದ ಭೋಜರಾಜನಂತೆ ಸಾಹಿತ್ಯಪ್ರೇಮಿಯೂ ಹೌದು. ಮೈಸೂರನ್ನು ಆಳಿದ ಯದುವಂಶದವರಾದ ಒಡೆಯರ್ ಮನೆತನದ ಅರಸರುಗಳ ಪರಂಪರೆಯಲ್ಲಿ ಇವರು ಇಪ್ಪತ್ತೆರಡನೆಯವರು. ಆದಿ ಯದುರಾಯ ಒಡೆಯರ್‌ರವರ (ಕ್ರಿ.ಶ.1399 ರಿಂದ 1423) ಆಳ್ವಿಕೆಯ ಕಾಲದಿಂದ ಒಂದು ಸ್ವತಂತ್ರ ರಾಜ್ಯವಾಗಿ ರೂಪುಗೊಂಡ ಹಳೆಯ ಮೈಸೂರು ಸಂಸ್ಥಾನ ಇದಕ್ಕೂ ಮೊದಲು ವಿಜಯನಗರ ಸಾಮ್ರಾಜ್ಯಕ್ಕೆ ಸೇರಿಹೋಗಿತ್ತು. ಮೈಸೂರಿನ ಅರಸರುಗಳು ವಿಜಯನಗರದ ಚಕ್ರಾಧಿಪತಿಗಳ ಸಾಮಂತರಾಗಿದ್ದರು ವಿಜಯನಗರಸಾಮ್ರಾಜ್ಯದ ಪತನಾನಂತರ ಮೈಸೂರು ಮಹಾಸಂಸ್ಥಾನವು ಪ್ರತ್ಯೇಕವಾಗಿ ಒಡೆಯರ್ ಮನೆತನವು ಸ್ವತಂತ್ರವಾಗಿ ಮೈಸೂರನ್ನು ಆಳತೊಡಗಿತು. 1399 ರಲ್ಲಿ ಪಟ್ಟಕ್ಕೆ ಬಂದ ಆದಿ ಯದುರಾಯ ಒಡೆಯರ್ ರವರಿಂದ ಪ್ರಾರಂಭಗೊಂಡು ಶ್ರೀ ಜಯಚಾಮರಾಜೇಂದ್ರ ಒಡೆಯರ್ ರವರ ಆಳ್ವಿಕೆಯವರೆಗೂ ಅಂದರೆ 1947ರವರೆಗೂ ಸಮಾರು 548 ವರ್ಷಗಳ ಕಾಲ ಮೈಸೂರು ಸಂಸ್ಥಾನವನ್ನು ಆಳಿದ ಯದುವಂಶರಾಜ ಪರಂಪರೆಯಲ್ಲಿಯೇ ದೀರ್ಘಾಯುಷಿಯಾಗಿ ಬಾಳಿದ ಹಾಗೂ ಅತ್ಯಂತ ಕಿರಿಯ ವಯಸ್ಸಿನಲ್ಲಿಯೇ ಸಿಂಹಾಸನವನ್ನು ಏರಿದಂತಹವರು ಶ್ರೀಮುಮ್ಮಡಿಕೃಷ್ಣರಾಜ ಒಡೆಯರ್ ರವರು. ಇವರ ಜೀವಿತ ಕಾಲ 1794 ರಿಂದ 1868.

ಕ್ರಿ.ಶ. 1794ರ ಜುಲೈ ಇಪ್ಪತ್ತೈದರಂದು ತಮ್ಮ ತಾಯಿಯವರ ತವರೂರಾದ 'ಅರಿಕುಠಾರ' (ಇಂದಿನ ಚಾಮರಾಜನಗರ) ಎಂಬ ಸಣ್ಣ ಗ್ರಾಮದಲ್ಲಿ ಶ್ರೀ

ಮುಮ್ಮಡಿಯವರು ಜನಿಸಿದವರು. ಆ ದಿನಗಳಲ್ಲಿ ಮೈಸೂರಿನ ಈ ರಾಜಮನೆತನವು ತೀವ್ರವಾದ ಸಂಕಷ್ಟದಲ್ಲಿತ್ತು. ತಮ್ಮ 548 ವರ್ಷಗಳ ಆಳ್ವಿಕೆಯ ದೀರ್ಘಾವಧಿಯಲ್ಲಿ ಯಾವುದೇ ರಾಜವಂಶ ಏಳುಬೀಳುಗಳನ್ನು ಅನುಭವಿಸುವಂತೆ ಒಡೆಯರ್ ಮನೆತನವೂ ಸಹ ಸುಮಾರು ಮೂವತ್ತೆಂಟು ವರ್ಷಕಾಲ ಹೈದರಾಲಿ ಹಾಗೂ ಅವನ ಮಗ ಟಿಪ್ಪುಸುಲ್ತಾನರಿಂದಾಗಿ ರಾಜ್ಯವನ್ನು ಕಳೆದುಕೊಂಡು ಸಂಕಷ್ಟದ ದಿನಗಳನ್ನು ಎದುರಿಸಬೇಕಾಯಿತು. ಮುಮ್ಮಡಿಯವರು ಜನಿಸುವುದಕ್ಕೂ ಮೊದಲೇ ಮೈಸೂರಿನ ರಾಜವಂಶಸ್ಥರು ಹಲವಾರು ಆಘಾತಗಳಿಂದ ತತ್ತರಿಸಿ ಹೋಗಿದ್ದರು ಹಾಗೂ ವಿಶ್ವಾಸದ್ರೋಹಿ ಹೈದರಾಲಿಯ ಪಿತೂರಿಗೆ ಗುರಿಯಾಗಿ ದುರ್ದಶೆಯನ್ನು ಅನುಭವಿಸುತ್ತಿದ್ದರು.

ಮುಮ್ಮಡಿಯವರ ತಂದೆ ಖಾಸಾ ಚಾಮರಾಜ ಒಡೆಯರ್, ತಾಯಿ ಕೆಂಪನಂಜಮ್ಮಣಿಯವರು. ಮುಮ್ಮಡಿಯವರಿಗೆ ಜನ್ಮ ನೀಡಿದ ಕೆಲವೇ ತಿಂಗಳುಗಳಲ್ಲಿ ಕೆಂಪನಂಜಮ್ಮಣ್ಣಿಯವರು ತೀರಿಕೊಂಡರು. ತಂದೆ ಶ್ರೀ ಚಾಮರಾಜ ಒಡೆಯರ್ ಮುಮ್ಮಡಿಯವರು ಎರಡು ವರ್ಷದ ಹಸುಳೆಯಾಗಿರುವಾಗಲೇ ಸಿಡುಬು ರೋಗಕ್ಕೆ ಬಲಿಯಾಗಿ ಮೃತರಾದರು. ಶ್ರೀ ಚಾಮರಾಜ ಒಡೆಯರ ರವರನ್ನು ಮೈಸೂರು ಸಂಸ್ಥಾನವನ್ನು ಅಂದಿನ ದಿನಗಳಲ್ಲಿ ಆಳುತ್ತಿದ್ದ ಇಮ್ಮಡಿಕೃಷ್ಣರಾಜ ಒಡೆಯರ್ ರವರಿಗೆ ದತ್ತು ನೀಡಲಾಗಿತ್ತು. ಇದೇ ಇಮ್ಮಡಿಕೃಷ್ಣರಾಜ ಒಡೆಯರ್‌ರವರೇ ಹೈದರಾಲಿಯ ಪಿತೂರಿಗೆ ಬಲಿಯಾಗಿ ತನ್ನ ದತ್ತು ಪುತ್ರ ಖಾಸಾಚಾಮರಾಜ ಒಡೆಯರ್‌ರವರಿಗಿಂತ ಮೊದಲೇ ತೀರಿಕೊಂಡಿದ್ದರು. ಇಮ್ಮಡಿಕೃಷ್ಣರಾಜ ಒಡೆಯರ್ ಪತ್ನಿಯೇ ಮೈಸೂರಿನ ಇತಿಹಾಸದಲ್ಲಿ ಚಾಣಾಕ್ಷಮತಿಯೆಂಬ ಖ್ಯಾತಿಗೆ ಪಾತ್ರರಾಗಿ ಉಜ್ವಲನಾಥೇಯರಾಗಿರುವ ಮಹಾರಾಣಿಲಕ್ಷ್ಮಿ ಅಮ್ಮಣ್ಣಿಯವರು. ಅನಾಥರಾದ ಮುಮ್ಮಡಿಯವರನ್ನು ಅಜ್ಜಿಲಕ್ಷ್ಮಿ ಅಮ್ಮಣ್ಣಿಯವರೇ ಅತಿ ಎಚ್ಚರಿಕೆಯಿಂದ ಬೆಳೆಸತೊಡಗಿದರು. ಹೀಗೆ 548 ವರ್ಷದಷ್ಟು ಕಾಲದ ತನ್ನ ಆಳ್ವಿಕೆಯ ಅವಧಿಯಲ್ಲಿ ಸುಮಾರು ಮೂವತ್ತೆಂಟು ವರ್ಷಕಾಲ ಮೈಸೂರಿನ ರಾಜವಂಶವು ಕರಾಳದ ದಿನಗಳನ್ನು ಅನುಭವಿಸಲು ಕಾರಣ ಇಮ್ಮಡಿಕೃಷ್ಣರಾಜ ಒಡೆಯರ್ ರ'ವ'ರ' ಸೈನ್ಯದಲ್ಲಿ ಸೇವೆ ಸಲ್ಲಿಸುತ್ತಿದ್ದ ವೀರ ಯೋಧ ಹೈದರಾಲಿ. ಈತನ ಶೌರ್ಯ ಸಾಹಸಗಳನ್ನು ಮೆಚ್ಚಿಕೊಂಡಿದ್ದ ಇಮ್ಮಡಿಕೃಷ್ಣರಾಜ ಒಡೆಯರ್ ಈತನಿಗೆ ಪದೋನ್ನತಿಯನ್ನು ನೀಡಿ 'ದಳವಾಯಿ' (Army Commander) ಹುದ್ದೆಗೇರಿಸಿದರು. ಒಬ್ಬ ಸಾಮಾನ್ಯ ಸಿಪಾಯಿಯಾಗಿದ್ದ ಹೈದರಾಲಿಯನ್ನು ಅವನ ಮನಸ್ಸನ್ನು ಅರಿಯದೆ ಉನ್ನತ ಹುದ್ದೆಗೇರಿಸಿದ ಹಾಗೂ ಆಗಿನ್ನೂ ತರುಣರಾಗಿದ್ದ ಇಮ್ಮಡಿ ಕೃಷ್ಣರಾಜ ಒಡೆಯರ್ ರವರನ್ನೇ ಹೈದರಾಲಿ ಪಿತೂರಿಯಿಂದ ಕೊಲ್ಲಿಸಿದನು.

ಹಾವಿಗೆ ಹಾಲೆರೆದಂತಾಯಿತು.

1761 ರಲ್ಲಿ ಹೀಗೆ ಮೈಸೂರು ಸಂಸ್ಥಾನವನ್ನು ಆಕ್ರಮಿಸಿಕೊಂಡ ಸ್ವಾಮಿದ್ರೋಹಿ ಹೈದರಾಲಿಯು ಒಡೆಯರ್ ವಂಶಸ್ಥರನ್ನು ಗೃಹಬಂಧನದಲ್ಲಿಟ್ಟನು. ಹೈದರಾಲಿಯ ನಂತರ ಅವನ ಮಗ ಟಿಪ್ಪುಸುಲ್ತಾನ್ ಮೈಸೂರು ಸಂಸ್ಥಾನದ ಅಧಿಪತಿಯಾದನು. ಇವರೆಲ್ಲರಿಗೂ ಶ್ರೀರಂಗಪಟ್ಟಣವೇ ರಾಜಧಾನಿಯಾಗಿತ್ತು. ಟಿಪ್ಪುಸುಲ್ತಾನನೂ ಸಹ ಒಡೆಯರ್ ಕುಟುಂಬಸ್ಥರ ಬಗ್ಗೆ ಬಹಳ ಕಠಿಣ ನಿಲುವನ್ನು ತಳೆದಿದ್ದನು. ಒಡೆಯರ್ ಕುಟುಂಬಕ್ಕೆ ಅತ್ಯಂತ ಕನಿಷ್ಠ ಸೌಲಭ್ಯವನ್ನು ಒದಗಿಸಲಾಗಿತ್ತು. ಇವರಿಗೆ ಟಿಪ್ಪುಸುಲ್ತಾನನೂ ಸಹಾಯ ಮಾಡುವವರನ್ನು ಟಿಪ್ಪು ಕ್ರೂರವಾಗಿ ದಂಡಿಸುತ್ತಿದ್ದನು.

ಇಂತಹ ಸಂಕಟದ ದಿನಗಳಲ್ಲಿಯೇ ಮುಮ್ಮಡಿಯವರ ಜನನವಾಗಿತ್ತು. ಮಗು ಜನಿಸಿದ ಕೆಲವೇ ತಿಂಗಳುಗಳಲ್ಲಿ ತಾಯಿ ಕೆಂಪನಂಜಮ್ಮಣ್ಣಿಯವರ ಮರಣ ಹಾಗೂ ಎರಡು ವರ್ಷದ ನಂತರ ತಂದೆ ಖಾಸಾಚಾಮರಾಜ ಒಡೆಯರ್ ನಿಧನವಾದರೂ, ಮೊಮ್ಮಗನನ್ನು ಧೈರ್ಯಶಾಲಿ ಅಜ್ಜಿಲಕ್ಷ್ಮಿ ಅಮ್ಮಣ್ಣಿಯವರು ಸಲಹುತ್ತಾ ಟಿಪ್ಪುಸುಲ್ತಾನನ ನಿವಾರಿಸಲು ಯುಕ್ತ ಸಂದರ್ಭಕ್ಕಾಗಿ ತಾಳ್ಮೆಯಿಂದ ನಿರೀಕ್ಷಿಸುತ್ತಿದ್ದರು. ಮೊಮ್ಮಗನಿಗೆ ಯೋಗ್ಯರೀತಿಯ ಅಭ್ಯಾಸ ನೀಡಬೇಕೆಂಬ ತೀವ್ರ ಹಂಬಲ ಹೊಂದಿದ್ದ ಲಕ್ಷ್ಮಿಅಮ್ಮಣ್ಣಿ ಮಗುವಿಗೆ ಕನ್ನಡದೊಡನೆ ಸಂಸ್ಕೃತಭಾಷೆಯ ಅಭ್ಯಾಸವನ್ನೂ ಸಹ ಕೊಡಿಸಲಾರಂಭಿಸಿದರು. ಮನಸ್ಸಿನ ಏಕಾಗ್ರತೆಗೆ ವಿಶೇಷವಾಗಿ ನೆರವಾಗುವ ಸಂಗೀತ ಶಿಕ್ಷಣವನ್ನೂ ಸಹ ಪ್ರಾರಂಭಿಸಲಾಯಿತು. ಕ್ಷತ್ರಿಯೋಚಿತವಾದ ಕುದುರೆ ಸವಾರಿ, ಕತ್ತಿಯ ವರಸೆ, ಮಲ್ಲವಿದ್ಯೆ ಕಠಿಣ ವ್ಯಾಯಾಮಾದಿಗಳನ್ನು ಸಹ ಕಲಿಸಲಾಯಿತು.

ಹೈದರಾಲಿಯು ಬ್ರಿಟೀಷರೊಡನೆ ಬೆಳಸಿಕೊಂಡಿದ್ದ ವೈಮನಸ್ಸು ಅವನ ಮಗ ಟಿಪ್ಪುಸುಲ್ತಾನನ ಕಾಲಕ್ಕೂ ಸಹ ಮುಂದುವರೆದು ಬ್ರಿಟಿಷರು ಅವನಿಗೆ ಕಡು ವೈರಿಗಳಾದರು. ಇದೇ ಸಂದರ್ಭದಲ್ಲಿ ಲಕ್ಷ್ಮಿಅಮ್ಮಣ್ಣಿಯವರು ಹೈದರಾಲಿ ಹಾಗೂ ಆತನ ಪುತ್ರನಿಂದ ರಾಜವಂಶಕ್ಕಾದ ದ್ರೋಹವನ್ನು ಸ್ಪಷ್ಟಪಡಿಸಿ ಬ್ರಿಟೀಷರ ನೆರವನ್ನು ಕೋರಿ ಅತ್ಯಂತ ರಹಸ್ಯವಾಗಿ ಪತ್ರವ್ಯವಹಾರ ನಡೆಸಿದರು. ಹೀಗೆ ಬ್ರಿಟೀಷರ ನೆರವನ್ನು ಕೋರಿ ಬರೆದ ಪತ್ರ ಸಫಲವಾಯಿತು. 1799 ರಲ್ಲಿ ಕೇರಳದ ತಿರುವನಂತಪುರದ ಅನಂತಪದ್ಮನಾಭಸ್ವಾಮಿ ದೇವಾಲಯದ ಅತುಳವಾದ ಐಶ್ವರ್ಯದಿಂದ ಆಕರ್ಷಿತನಾಗಿ ತಿರುವನಂತಪುರದತ್ತ ಆಕ್ರಮಣಕ್ಕಾಗಿ ಟಿಪ್ಪುಸುಲ್ತಾನನು ಹೊರಟು ಈಗಿನ 'ಸುಲ್ತಾನ್ ಬತೇರಿ' ಎಂಬ ಸ್ಥಳವನ್ನು ತಲುಪುವಷ್ಟರಲ್ಲಿ ಇತ್ತ ಶ್ರೀರಂಗಪಟ್ಟಣಕ್ಕೆ ಬ್ರಿಟೀಷರು

ಮುತ್ತಿಗೆ ಹಾಕಿದರು. ಈ ವಾರ್ತೆಯನ್ನು ಕೇಳಿ ಅನಂತಪದ್ಮನಾಭನಿಗೆ ಪ್ರಾರ್ಥನೆ ಸಲ್ಲಿಸುತ್ತಾ ತನ್ನನ್ನು ಪಾರು ಮಾಡಬೇಕೆಂದು ಬೇಡಿಕೊಳ್ಳುತ್ತಿದ್ದ ತಿರುವನಂತಪುರದ ಪ್ರಭು ಮಾರ್ತಾಂಡವರ್ಮ ಅತೀವ ಸಂತುಷ್ಟನಾದ.

ಹೀಗೆ 1799 ರಲ್ಲಿ ಬ್ರಿಟೀಷರಿಗೂ ನಡೆದ ಘೋರ ಯುದ್ಧದಲ್ಲಿ ಟಿಪ್ಪುಸುಲ್ತಾನನು ತನ್ನನ್ನು ಪಾರು ಮಾಡಬೇಕೆಂದು ಬೇಡಿಕೊಳ್ಳುತ್ತಿದ್ದ ತಿರುವನಂತಪುರದ ಪ್ರಭು ಮಾರ್ತಾಂಡವರ್ಮ ಅತೀವ ಸಂತುಷ್ಟನಾದ. ಹೀಗೆ 1799ರಲ್ಲಿ ಬ್ರಿಡಟೀಷರಿಗೂ ಟಿಪ್ಪುಸುಲ್ತಾನನಿಗೂ ನಡೆದ ಘೋರ ಯುದ್ಧದಲ್ಲಿ ಟಿಪ್ಪುಸುಲ್ತಾನನಿಗೂ ತನ್ನ ಇತರ ಸಿಪಾಯಿಗಳ ನಡುವೆ ತನ್ನನ್ನು ಗುರುತಿಸಲಾಗದಂತೆ ಮುನ್ನೆಚ್ಚರಿಕೆವಹಿಸದ್ದರೂ ಸಹ 1799ರ ಮೇ ತಿಂಗಳ ನಾಲ್ಕನೆಯ ತಾರೀಖು ಟಿಪ್ಪುವಿನ ವಧೆಯಾಯಿತು. ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿಯವರಿಗೆ ಬ್ರಿಟೀಷರು ಕೊಟ್ಟಿದ್ದ ಮಾತಿನ ಪ್ರಕಾರವಾಗಿ 1799ರ ಜೂನ್ 30ನೇ ಯ ತಾರೀಖಿನಲ್ಲಿ ಮೈಸೂರಿನ ಅರಮನೆಯ ಆವರಣದಲ್ಲಿನ ಲಕ್ಷ್ಮಿನಾರಾಯಣಸ್ವಾಮಿ ದೇವಸ್ಥಾನದ ಬಳಿ ವಿಶೇಷವಾಗಿ ನಿರ್ಮಿಸಲಾಗಿದ್ದ ಮಂಟಪದಲ್ಲಿ ಕೇವಲ ಐದು ವರ್ಷದ ಬಾಲಕರಾಗಿದ್ದ ಮುಮ್ಮಡಿಕೃಷ್ಣರಾಜ ಒಡೆಯರ್ ರವರಿಗೆ ಪಟ್ಟಾಭಿಷಕ್ತನಾಗುವ ಐತಿಹಾಸಿಕ ಘಟನೆಗೆ ಬ್ರಿಟಿಷ್ ಸರ್ಕಾರದ ಉನ್ನತ ಅಧಿಕಾರಿಗಳೂ ಸಹ ಸಾಕ್ಷಿಗಳಾದರು. ಎಳೆವಯಸ್ಸಿನ ರಾಜಪುತ್ರನನ್ನು ಬಾಲಕನೆಂದು ತಿರಸ್ಕರಿಸಲಾಗದು. ಇವನು ನರರೂಪದ ಮಹಾದೇವತೆಯೆಂದು ಮನುಸ್ಮೃಯಲ್ಲಿ ಹೇಳಿರುವುದನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬಹುದು.

**ಬಾಲೋಪಿನಾವಮಂತವ್ಯೋ ಮನುಷ್ಯ ಇತಿ ಭೂಮಿಪಃ**
**ಮಹತೀದೇವತಾಹ್ಯೇಷಃನರರೂಪೇಣ ತಿಷ್ಠತಿ**

ಬ್ರಿಟನ್ನಿನ ವರಿಷ್ಠಾಧಿಕಾರಿಯೊಬ್ಬರು (Duke of Wellington)ಬಾಲಕ ಮುಮ್ಮಡಿಯವರನ್ನು ವೇದಿಕೆಗೆ ಕೈ ಹಿಡಿದು ಕರೆತಂದ ವಿಚಾರವನ್ನು ಹಲವಾರು ಗ್ರಂಥಗಳಲ್ಲಿ ದಾಖಲಿಸಲಾಗಿದೆ. ಟಿಪ್ಪುಸುಲ್ತಾನನಿಗೆ ದಿವಾನರಾಗಿ ಸೇವೆಸಲ್ಲಿಸುತ್ತಿದ್ದ ಪೂರ್ಣಯ್ಯನವರನ್ನೇ ಪುನಃ ಮೈಸೂರಿನ ದಿವಾನರಾಗಿ ಆಡಳಿತದಲ್ಲಿ ನೆರವಾಗಲು ನಿಯೋಜಿಸಲಾಯಿತು. ಮುಮ್ಮಡಿಯವರಿಗೆ ಹದಿನಾಲ್ಕು ವರ್ಷ ತುಂಬುವವರೆಗೂ ಅಜ್ಜಿಲಕ್ಷ್ಮಿಅಮ್ಮಣ್ಣಿಯವರೇ ಆಡಳಿತದ ಜವಾಬ್ದಾರಿಯನ್ನು ಹೊತ್ತುಕೊಂಡರು. ಮೂವತ್ತೆಂಟು ವರ್ಷಗಳಕಾಲ ಹೈದರಾಲಿ ಮತ್ತು ಅವನ ಮಗ ಟಿಪ್ಪುವಿನ ವಶವಾಗಿದ್ದ ಮೈಸೂರು ರಾಜ್ಯ ಮತ್ತೆ ಯದುವಂಶದವರ ಅಧೀನಕ್ಕೆ ಬಂದಿತು. ಕೈತಪ್ಪಿ ಹೋಗಿದ್ದ ಮೈಸೂರು ಸಂಸ್ಥಾನವನ್ನು ಯುಕ್ತಿಯಿಂದ ಹಿಂದಕ್ಕೆ ಪಡೆಯುವಲ್ಲಿ ಅಜ್ಜಿ ಲಕ್ಷ್ಮಿ

ಅಮ್ಮಣ್ಣಿಯವರ ಪಾತ್ರವು ಬಹಳ ಮಹತ್ತರವಾದುದು. ಯದುವಂಶದ ಏಕಮಾತ್ರ ಕುಡಿಯಗಿ ಉಳಿದುಕೊಂಡಿದ್ದ ಮುಮ್ಮಡಿಯವರನ್ನು ಕಣ್ಣಲ್ಲಿ ಕಣ್ಣಿಟ್ಟು ಬೆಳಸಿ, ಬಲ್ಯಾದಿಂದಲೂ ಕ್ಷತ್ರಿಯೋಚಿತವಾದ ಶಿಕ್ಷಣದ ಜೊತೆಗೆ, ಸಂಸ್ಕೃತ,ಹಿಂದಿ, ಮರಾಠಿ, ಪರ್ಷಿಯನ್ ತಕ್ಕಮಟ್ಟಿಗೆ ಇಂಗ್ಲಿಷ್ ಹೀಗೆ ಬಹುಭಾಷಾವಿಶಾರದರೂ, ಸಾಹಿತ್ಯ ಸಂಗೀತ ಕಲಾಪ್ರೇಮಿಯೂ ಜನಾನುರಾಗಿಯೂ ಆದ ಅರಸರಾಗಿ ರೂಪುಗೊಳ್ಳವಂತೆ ಮಾಡಿದವರು ಅಜ್ಜಿಲಕ್ಷ್ಮಿಅಮ್ಮಣ್ಣಿಯವರು.

ಐದನೆಯ ವಯಸ್ಸಿನಿಂದಲೇ ವ್ಯಾಯಾಮ, ಕತ್ತಿಯವರಸೆ, ಕುದುರೆಯ ಸವಾರಿಯ ಜೊತೆಗೆ ತಂಜಾವೂರಿನಿಂದ ಆಹ್ವಾನಿತರಾಗಿದ್ದ ವೀಣಾವಿದ್ವಾನ್ ವೆಂಕಟಸುಬ್ಬಯ್ಯನವರಿಂದ ಸಂಗೀತ ಶಿಕ್ಷಣಪ್ರಾರಂಭವಾಯಿತು. ಹಾಗೆಯೇ ಪೆರಿಯಸ್ವಾಮಿ ತಿರುಮಲಾಚಾರ್ಯರವರಿಂದ ಸಂಸ್ಕೃತಶಿಕ್ಷಣ ಪ್ರಾರಂಭವಾದುದು ಮನಸ್ಸನ್ನು ಏಕಾಗ್ರತೆಗೆ ತರುವಲ್ಲಿ ತತ್ಫಲವಾಗಿ ಅತಿಯಾದ ಸಾಹಿತ್ಯಾಸಕ್ತಿ ಮೂಡಿಸುವಲ್ಲಿ ಸಫಲವಾಯಿತು. ಕನ್ನಡನಾಡಿನ ಸಾಹಿತ್ಯಾ ಮತ್ತು ಸಾಂಸ್ಕೃತಿಕ ಪರಂಪರೆ ಒಂದು ವಿಶೇಷವಾದ ಮೆರಗನ್ನು ಪಡೆದುಕೊಳ್ಳಲು, ಇಂದಿಗೂ ಸಹ ಮೈಸೂರು ತನ್ನದೇ ಆದ ಸಾಂಸ್ಕ್ರತಿಕ ಶೋಭೆಯಿಂದ ವಿಶ್ವಮಾನ್ಯತೆ ಪಡೆಯುವಲ್ಲಿ ಮುಮ್ಮಡಿಯವರ ಪಾತ್ರ, ಅವರು ಹಾಕಿದ ತಳಪಾಯ ಅತ್ಯಂತ ಮಹತ್ತರವಾದುದು.

**ಮುಮ್ಮಡಿಕೃಷ್ಣರಾಜ ಒಡೆಯರ ರಾಜಕೀಯ ಜೀವನ ಮತ್ತು ಸಾಧನೆಗಳೆಂದರೆ:** ಮುಮ್ಮಡಿಯವರಿಗೆ ಹದಿನಾರು ವರ್ಷ ತುಂಬುವವರೆಗೆ ಅವರ ಅಜ್ಜಿಲಕ್ಷ್ಮಿಅಮ್ಮಣ್ಣಿಯವರೇ ಮೊಮ್ಮಗನ ಪರವಾಗಿ ಯಶಸ್ವಿಯಾಗಿ ಆಡಳಿತ ನಡೆಸಿದರು. ರಾಜಕೀಯ ನಿರ್ವಹಣೆಯಲ್ಲಿ ಅವರಿಗೆ ಬಲಭುಜವಾಗಿದ್ದರು ಆಡಳಿತದಲ್ಲಿ ಪಳಗಿದ್ದ ಹಾಗೂ ರಾಜನೀತಿಶಾಸ್ತ್ರದಲ್ಲಿ ನಿಷ್ಣಾತರಾಗಿದ್ದ ದಿವಾನ್ ಪೂರ್ಣಯ್ಯನವರು. ಕ್ರಿ.ಶ.1810ರಲ್ಲಿ ಮುಮ್ಮಡಿಯವರಿಗೆ ಹದಿನಾರು ವರ್ಷಗಳು ತುಂಬಿದವು. ಬ್ರಿಟಿಷ್ ಸರ್ಕಾರವು ಆಡಳಿತದ ಜವಾಬ್ದಾರಿಯನ್ನು ಪೂರ್ಣಯ್ಯನವರಿಂದ ಹಿಂಪಡೆದು ಮುಮ್ಮಡಿಯವರಿಗೆ ವಹಿಸಿತು. ಇದಾದ ಮರು ವರ್ಷದಲ್ಲಿಯೇ ಅರ್ಥಾತ್ 1811ರಲ್ಲಿ ದಿಟ್ಟ ಮಹಿಳೆಯೂ ಚಾಣಾಕ್ಷಮತಿಯೂ ಆಗಿದ್ದ, ಮೈಸೂರು ಸಂಸ್ಥಾನವನ್ನು ಮತ್ತೆ ಒಡೆಯರ್ ವಂಶಕ್ಕೆ ಲಭಿಸುವಂತಾದ ಐತಿಹಾಸಿಕ ಘಟನೆಯ ರೂವಾರಿಯಾಗಿದ್ದ ಮಾತೆ ಅಜ್ಜಿಲಕ್ಷ್ಮಿಅಮ್ಮಣ್ಣಿಯವರು ತಮ್ಮ ಅರವತ್ತೆಂಟನೆಯ ವಯಸ್ಸಿನಲ್ಲಿ ದಿವಂಗತರಾದರು. ಅನಂತರ ಕೆಲವೇ ತಿಂಗಳುಗಳಲ್ಲಿ ದಿವಾನ್‌ಪೂರ್ಣಯ್ಯನವರೂ ಸಹ ವಿಧಿವಶರಾದರು. ಆಗಷ್ಟೇ ತಾರುಣ್ಯದಲ್ಲಿ ಕಾಲಿಟ್ಟದ್ದ, ರಾಜಕೀಯವಾಗಿ ಇನ್ನು ಅನನುಭವಿಯಾಗಿದ್ದ ಮುಮ್ಮಡಿಯವರನ್ನು ಈ ಘಟನೆಗಳು ಸಂದಿಗ್ಧ

ಪರಿಸ್ಥಿತಿಗೆ ಸಿಲುಕುವಂತೆ ಮಾಡಿದವು. ಸಾಹಿತ್ಯ, ಸಂಗೀತಾದಿ ಕಲೆಗಳ ಅಭ್ಯಾಸದಲ್ಲಿಯೇ ಹೆಚ್ಚು ಸಮಯವನ್ನು ಕಳೆದಿದ್ದ ಅವರು ಲೋಕಜ್ಞಾನವರಿಯದ ಮುಗ್ಧರಾಗಿದ್ದರು. ಇದೇ ಸಂದರ್ಭದಲ್ಲಿ ಕಪಟಿಗಳಾದ ರಾಜ್ಯಾಡಳಿತ ಶಾಖೆಯಲ್ಲಿದ್ದ ಕೆಲವು ಉದ್ಯೋಗಿಗಳು ಸಮಸ್ಯೆಗಳನ್ನು ಸೃಷ್ಟಿಸಲಾರಂಭಿಸಿದರು. ಮುಮ್ಮಡಿಯವರು ಅನಗತ್ಯ ಖರ್ಚುಗಳಿಗಾಗಿ ರಾಜ್ಯದ ಧನಸಂಪತ್ತನ್ನು ದುರ್ಬಳಕೆ ಮಾಡುತ್ತಿದ್ದಾರೆಂಬ ವದಂತಿಗಳನ್ನು ಹಬ್ಬಿಸಿ ಅವರ ವಿರುದ್ಧವಾಗಿ ಬ್ರಿಟಿಷರ ಪರವಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಮೇಜರ್ ಜನರಲ್ ಎ.ಎಚ್. ಕೋಲ್ ರವರಿಗೆ (A.H.Cole) ದೂರು ನೀಡಲಾಯಿತು.

ಈ ಅಧಿಕಾರಿಯು ಇದರಿಂದ ತೀವ್ರವಾಗಿ ಅಸಮಾಧಾನಗೊಂಡು ಮದರಾಸಿನಲ್ಲಿದ್ದ ಬ್ರಿಟಿಷ್ ಗವರ್ನರ್ ಥಾಮಸ್ ಮುನ್ರೋ (Thomas Munro) ರವರಿಗೆ ಪತ್ರ ಬರೆದು, ಮುಮ್ಮಡಿಯವರಿಂದ ಆರ್ಥಿಕ ನಿರ್ವಹಣೆ ಸಮರ್ಪಕವಾಗಿ ಆಗುತ್ತಿಲ್ಲ ವೆಂದು ದೂರು ನೀಡಿದರು. ಇಷ್ಟು ಸಾಲದೆಂಬಂತೆ ದೇಶದಲ್ಲಿ ಕ್ಷಾಮ ತಲೆದೋರಿತು. ಬೆಂಕಿಗೆ ತುಪ್ಪ ಹೊಯ್ದಂತೆ ಕಾಲರಾ ಮೊದಲಾದ ಅಂಟುಜಾಡ್ಯಗಳೂ ಸಹ ತಾಂಡವವಾಡಿದವು. ಜನರ ಸಾಕಷ್ಟು ಸಂಕಷ್ಟಗಳನ್ನು ಅನುಭವಿಸಿದರು. ಇವೆಲ್ಲಕ್ಕೂ ಸಹ ಮುಮ್ಮಡಿಯವರನ್ನೆ ಹೊಣೆಯಾಗಿ ಪರಿಗಣಿಸಿ ಬ್ರಿಟಿಷರು ಅಧಿಕಾರವನ್ನು ಮುಮ್ಮಡಿಯವರಿಂದ ಕಸಿದುಕೊಂಡು, ಅವರನ್ನು ನೆಪಮಾತ್ರಕ್ಕೆ ರಾಜರನ್ನಾಗಿ ಮಾಡಿ, ಮೈಸೂರು ಸಂಸ್ಥಾನದ ಆಡಳಿತವನ್ನು ತಾವೇ ನೇರವಾಗಿ ನಡೆಸತೊಡಗಿದರು. ಮದರಾಸಿನಿಂದ ಮಾರ್ಕ್ ಕಬ್ಬನ್ (Mark Cubbon)ಎಂಬ ಬ್ರಿಟಿಷರು ತಮ್ಮ ಅಧೀನದಲ್ಲಿಯೇ ಇಟ್ಟುಕೊಂಡರು. ಮುಮ್ಮಡಿಯವರ ಖರ್ಚುವೆಚ್ಚಕ್ಕಾಗಿ ವರ್ಷಕ್ಕೆ ಮೂರುವರೆ ಲಕ್ಷರೂಪಾಯಿಗಳನ್ನು, ಭೂಕಂದಾಯದ ಸಂಗ್ರಹದಿಂದ ಅಶ್ವಾರೋಹಿದಳದ ಖರ್ಚು, ಸಂಸ್ಥಾನದ ಸಿಬ್ಬಂದಿಗಳ ವೇತನದ ಖರ್ಚು, ಪಂಜುದಳದವರ ವೇತನ ಇತ್ಯಾದಿಗಳನ್ನು ನಿರ್ವಹಿಸಿ ಉಳಿದ ಹಣವನ್ನು ಅರಮನೆಯ ಖರ್ಚಿಗೆ ನೀಡುವ ವ್ಯವಸ್ಥೆ ಮಾಡಲಾಗಿತ್ತು, 1831 ರಿಂದ 1886 ರವರೆಗೂ ಸಹ ಹೀಗೆ ರಾಜ್ಯವು ಬ್ರಿಟೀಷರ ಅಧೀನದಲ್ಲಿತ್ತು. ಬ್ರಿಟಿಷರು ನೀಡುತ್ತಿದ್ದ ವಾರ್ಷಿಕ ಅನುದಾನದಲ್ಲಿಯೇ ಮುಮ್ಮಡಿಯವರು ಕುಟುಂಬ, ಪರಿವಾರದವರ ಅಗತ್ಯಗಳನ್ನು ನಿಭಾಯಿಸಿ ಉಳಿದ ಹಣವನ್ನು ದಾನಧರ್ಮಗಳಲ್ಲಿ ವಿನಿಯೋಗಿಸುತ್ತಿದ್ದರು. ಅವರ ವ್ಯಕ್ತಿತ್ವದಲ್ಲಿ ಹುದುಗಿದ್ದ ಶುದ್ಧ ಮನಸ್ಸಿನ ಕೊಡುಗೈನ ಕಾಮಧೇನುವನ್ನು ಪ್ರಚೋದಿಸಲು ಅನುದಾನದಲ್ಲಿದ್ದ ಉಳಿತಾಯದ ಹಣವೇ ಸಾಕಾಗುತ್ತಿತ್ತು. ಬ್ರಿಟೀಷರು ತಾವೇ ಆಡಳಿತವನ್ನು ನಡೆಸಲು ತೊಡಗಿ ಮುಮ್ಮಡಿಯವರಿಗೆ ಬಿಡುವು ದೊರಕಿಸಿಕೊಟ್ಟಿದ್ದು ಅವರ ವ್ಯಕ್ತಿತ್ವದಲ್ಲಿ

ಸುಪ್ತವಾಗಿದ್ದ' ಭೋಜರಾಜ'ನನ್ನು ಜಾಗ್ರತಗೊಳಿಸಲು ಅನುಕೂಲವು ದೊರೆತಂತಾಯಿತು.

ಬಾಲ್ಯದಲ್ಲಿ ಕಲಿತಿದ್ದ ಸಂಸ್ಕೃತ ಸಾಹಿತ್ಯ ಮತ್ತು ಕನ್ನಡ ಸಾಹಿತ್ಯಗಳಲ್ಲಿನ ಲೋಕೋತ್ತರವಾದ ಕೃತಿಗಳ ಅಧ್ಯಯನವು ವಿಶಿಷ್ಟರೀತಿಯಲ್ಲಿ ಮುಮ್ಮಡಿಯವರ ಮೇಲೆ ಗಾಢವಾದ ಪ್ರಭಾವವನ್ನು ಬೀರಲಾರಂಭಿಸಿದವು. ತಮ್ಮ ಆಸಕ್ತಿಗಳಿಗೆ ಪೂರಕವಾಗಬಲ್ಲ ವಾತಾವರಣವನ್ನು ಸೃಷ್ಟಿಸಿಕೊಂಡ ಮುಮ್ಮಡಿಯವರು ರಾಜ್ಯದ ನಾನಾಭಾಗಗಳಿಂದ ಕವಿಗಳನ್ನು, ಶಾಸ್ತ್ರಕೋವಿದರನ್ನು, ಸಂಗೀತ ಮತ್ತು ಚಿತ್ರಕಲಾವಿದರನ್ನು ಕರಕುಶಲವಸ್ತುವಿನ್ಯಾಸಕರನ್ನು ಆಸ್ಥಾನಕ್ಕೆ ಆಹ್ವಾನಿಸಿ ಅವರಿಗೆ ಪ್ರೇರಣೆ ಪೋಷಣೆಗಳನ್ನು ನೀಡತೊಡಗಿದರು. ತಮಿಳುನಾಡು, ಆಂದ್ರಪ್ರದೇಶ, ಮಹಾರಾಷ್ಟ್ರ ಮೊದಲಾದ ರಾಜ್ಯಗಳಿಂದಲೂ ಸಹ ಸಂಸ್ಕೃತ ವಿದ್ವಾಂಸರುಗಳು ಮೈಸೂರಿಗೆ ಆಗಮಿಸತೊಡಗಿದರು. ಮಹಾರಾಷ್ಟ್ರದಲ್ಲಿ ಪೇಶ್ವೆಗಳ ಸಾಮ್ರಾಜ್ಯವು ನಿರ್ನಾಮವಾದ ಮೇಲೆ ಅಲ್ಲಿನ ವೈದಿಕಮನೆತನಗಳು ಮೈಸೂರಿಗೆ ವಲಸೆ ಬಂದರು. ಹೀಗೆ ಬಂದ ಸಂಸ್ಕೃತವಿದ್ವಾಂಸರಲ್ಲಿ ಪ್ರಮುಖರಾದವರು(1) ಚತುಃಶಾಸ್ತ್ರವಿಶಾರದ ರಾದ ತ್ರ್ಯಂಬಕಶಾಸ್ತ್ರಿ (2)ವ್ಯಾಕರಣಶಾಸ್ತ್ರದಲ್ಲಿ ಪರಿಣತರಾದ ಕಾಶೀನಾಥಶಾಸ್ತ್ರಿ ಹಾಗೂ ವಿಶ್ವನಾಥಶಾಸ್ತ್ರಿ (3) ಮಂತ್ರಶಾಸ್ತ್ರದಲ್ಲಿ ನಿಷ್ಣಾತರಾದ ರಾಜೇಶ್ವರಶಾಸ್ತ್ರಿ (4) ತರ್ಕಶಾಸ್ತ್ರದಲ್ಲಿ ಗಾಢ ಪಾಂಡಿತ್ಯ ಗಳಿಸಿದ್ದ ಬಾಳಾಚಾರ್ಯ (5) ಅಲಂಕಾರಶಾಸ್ತ್ರದಲ್ಲಿ ಸಿದ್ಧಹಸ್ತರಾದ ತೆಂಗಳೆ ಸುದರ್ಶನಾಚಾರ್ಯ (6) ವೇದಾಂತದಲ್ಲಿ ಸಿದ್ಧಹಸ್ತರಾದ ಕುಣಿಗಲ್‌ರಾಮಾಶಾಸ್ತ್ರಿ (7)ಜ್ಯೋತಿಷ್ಯದಲ್ಲಿ ಘನವಿದ್ವಾಂಸರಾಗಿದ್ದ ವಿಷ್ಣುಪಾದಾಚಾರ್ಯ (8) ದ್ವೈತವೇದಾಂತ ವಿಶಾರದರಾಗಿದ್ದ ಕಾಶಿತಿಮ್ಮಣ್ಣಾಚಾರ್ಯ (9) ವಿಶಿಷ್ಟಾದ್ವೈತಕೊವಿದರಾಗಿದ್ದ ಆನಂದಾಳ್ವರರು (10) ತರ್ಕಶಾಸ್ತ್ರ ಪಂಡಿತರುಗಳಾದ (11) ತಿರುಪತಿ ಶ್ರೀನಿವಾಸಚಾರ್ಯ (ತರ್ಕಶಾಸ್ತ್ರ) (12) ನಾಮ ಗಿರಿ ತಾತಾ ಚಾರ್ಯ (13) ವ್ಯಾಕರಣಶಾಸ್ತ್ರವಿದ್ವಾಂಸರುಗಳಾದ ಕಾಶಿಶೇಷಶಾಸ್ತ್ರಿ (14) ವ್ಯಾಸಕೃಷ್ಣಾಚಾರ್ಯ ಮತ್ತು ಕಾಶಿವಿಶ್ವನಾಥಶಾಸ್ತ್ರಿ ಹಾಗೂ ನರಸಿಂಹಶಾಸ್ತ್ರಿ ಇವರುಗಳು ಮುಮ್ಮಡಿಯವರ ಆಸ್ಥಾದಲ್ಲಿ ಗುರುತಿಸಲಾಗಿದ್ದ ಸಂಸ್ಕೃತ ವಿದ್ವಾಸರುಗಳು. ಬಾಲ್ಯದಿಂದಲೇ ಸಂಸ್ಕೃತ ಭಾಷೆಯತ್ತ ಮುಮ್ಮಡಿಯವರು ಆಕರ್ಷಿತರಾಗಲು ಕಾರಣ ಅವರ ಸಂಸ್ಕೃತ ಗುರುಗಳಾದ ಪೆರಿಯ ಸ್ವಾಮಿ ತಿರುಮಲಾಚಾರ್ಯರು. ಪಲವಾರು ಸಂಸ್ಕೃತ ಕವಿಗಳೂ ಸಹ ರಾಜಾಶ್ರಯ ಪಡೆದಿದ್ದು ಅವರುಗಳಲ್ಲಿ ಪ್ರಸಿದ್ಧರಾದವರು ಅನವಟ್ಟಿ ಶ್ರೀನಿವಾಸಾಚಾರ್ಯ, ಶಾಂತರಾಜಪಂಡಿತ, ಕವಿವರದಾಚಾರ್ಯ, ಶ್ರೀನಿವಾಸಕವಿ, ಪೆರಿಯಕೃಷ್ಣಮಾಚಾರ್. ಇವರುಗಳಲ್ಲಿ ಪೆರಿಯ ಕೃಷ್ಣಮಾಚಾರ್ಯರಿಂದ ಪರಕಾಲವಿಜಯಚಂಪೂ, ಕವಿ

ವರದಾಚಾರ್ಯರಿಂದ ಗುರುರಾಜಚಂಪೂ, ಸುಬ್ರಹ್ಮಣ್ಯ ಎಂಬುವರಿಂದ ತಾರಾಶಶಾಂಕವೆಂಬ ನಾಟಕ, ಅನವಟ್ಟಿ ಶ್ರೀನಿವಾಸಾಚಾರ್ಯರಿಂದ 'ಅನಿರುದ್ಧವಿಜಯ' ವೆಂಬ ಸಂಸ್ಕೃತ ನಾಟಕ, ಶ್ರೀನಿವಾಸಕವಿ ಎಂಬುವರಿಂದ ಕೃಷ್ಣನೃಪಜಯೋತ್ಕರ್ಷ, ಶಾಂತರಾಜ ಪಂಡಿತರಿಂದ ಸರಸಿಜನ ಚಿಂತಾಮಣಿ ಮೊದಲಾದ ಸಂಸ್ಕೃತ ಕೃತಿಗಳು ರಚನೆಗೊಂಡವು.

ಸ್ವತಃ ಸಂಗೀತಶಾಸ್ತ್ರಜ್ಞರೂ, ವೀಣಾವಾದನ ಪರಿಣತರೂ ಆಗಿದ್ದ ಮುಮ್ಮಡಿಯವರ ಆಸ್ಥಾನದಲ್ಲಿ ಪ್ರಸಿದ್ಧ ಸಂಗೀತ ವಿದ್ವಾಂಸರುಗಳಾದ ವೀಣಾ ವೆಂಕಟಸುಬ್ಬಯ್ಯ, ವೀಣಾ ಸಾಂಬಯ್ಯ, ವೀಣೆ ಅಣ್ಣಯ್ಯ, ಸದಾಶಿವರಾಯರು, ಅನಂತಸುಬ್ಬಯ್ಯ ಮತ್ತು ವೆಂಕಟಸುಬ್ಬಯ್ಯ ಮೊದಲಾದವರಲ್ಲಿದೆ. ಇನ್ನೂ ಅರವತ್ತೈದು ಜನ ಸಂಗೀತವಿದ್ವಾಂಸರುಗಳಿಗೆ ರಾಜಾಶ್ರಯ ದೊರೆತಿತ್ತು. ಚಿತ್ರಕಲಾವಿದರನ್ನು, ಕರಕುಶಲವಸ್ತುಗಳ ತಯಾರಿಕೆಯಲ್ಲಿ ಪರಿಣತರಾದವರನ್ನು ಗುರುತಿಸಿ ಆಸ್ಥಾನಕ್ಕೆ ಆಹ್ವಾನಿಸಿ ಅವರುಗಳ ಪ್ರತಿಭೆಯ ಸದುಪಯೋಗವನ್ನು ನಾಡಿನ ಜನರೆಲ್ಲರಿಗೂ ಲಭಿಸುವಂತೆ ಮಾಡಿದವರು ಮುಮ್ಮಡಿ ಕೃಷ್ಣರಾಜ ಒಡೆಯರ್ ರವರು. ಮುಂದೆ ಈ ಬಗ್ಗೆ ವಿಶೇಷವಾದಿ ಪ್ರಸ್ತಾವಿಸಲಾಗಿದೆ. ಬಾಲ್ಯದಿಂದಲೂ ಸಂಸ್ಕೃತ ಮತ್ತು ಕನ್ನಡ ಭಾಷೆಗಳ ಸಾಹಿತ್ಯಕೃತಿಗಳನ್ನು ಗಾಢವಾಗಿ ಅಧ್ಯಯನ ಮಾಡಿದ್ದ ಮುಮ್ಮಡಿಯವರು ಹಿಂದೂಸ್ತಾನಿ, ಮರಾಠಿ ಭಾಷೆಗಳನ್ನೂ, ಪರ್ಷಿಯನ್ ಹಾಗೂ ತೆಲುಗು ಭಾಷೆಗಳನ್ನೂ ತಕ್ಕಮಟ್ಟಿಗೆ ಬಲ್ಲವರಾಗಿದ್ದರು. ಇಂಗ್ಲಿಷ್ ಭಾಷೆಯಲ್ಲಿ ವ್ಯವಹರಿಸುವಷ್ಟು ಜ್ಞಾನವನ್ನು ಗಳಿಸಿಕೊಂಡಿದ್ದರಲ್ಲದೆ ಪ್ರಪ್ರಥಮ ಬಾರಿಗೆ ಶೇಕ್ಸ್ ಪಿಯರನ ದುರಂತನಾಟ' ಒಥೆಲೋ' ಕೃತಿಯನ್ನು ಕನ್ನಡಕ್ಕೆ ಶೂರಸೇನಚರಿತವೆಂಬ ಹೆಸರಿನಲ್ಲಿ ಅನುವಾದಿಸುವ ಕಾರ್ಯಕ್ಕೆ ಪ್ರೋತ್ಸಾಹ ನೀಡಿದ್ದಲ್ಲದೆ, ಬಹಳಷ್ಟು ಸಂಸ್ಕೃತ ಸಾಹಿತ್ಯ ಕೃತಿಗಳು ಕನ್ನಡದಲ್ಲಿ ರಚಿತಗೊಂಡವು.

ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ರಚಿಸಿದ ಸಾಹಿತ್ಯ ಕೃತಿಗಳು: ಬ್ರಿಟಿಷರೇ ನೇರವಾಗಿ ಆಡಳಿತ ನಡೆಸುದುದರಿಂದ ಮುಮ್ಮಡಿಯವರಿಗೆ ಸಾಹಿತ್ಯಕೃತಿಗಳ ರಚನೆಗೆ ಸದಾವಕಾಶ ದೊರೆತಂತಾಯಿತು. ಇವರ ಜೀವಿತಕಾಲದಲ್ಲಿ ರಚನೆಯಾದ ಕೃತಿಗಳ ಸಾಹಿತ್ಯ ಹಾಗೂ ಸಾಂಸ್ಕೃತಿಕ ಸಾಧನೆಗಳು, ಕನ್ನಡನಾಡಿಗೆ, ವಿಶೇಷವಾಗಿ ಮೈಸೂರು ಸಂಸ್ಥಾದ ಜನರ ಹಿತಕ್ಕಾಗಿ ನಡೆದ ದಾನಧರ್ಮಗಳ ಬಗ್ಗೆ ಮುಂದಿನ ಸಾಲುಗಳಲ್ಲಿ ನೀಡಲಾಗಿದೆ. ಎಪ್ಪತ್ತು ವರ್ಷಗಳ ಸುದೀರ್ಘ ಆಳ್ವಿಕೆಯ ಅವಧಿಯಲ್ಲಿ ಸಾಹಿತ್ಯಕ್ಷೇತ್ರದ ವಿವಿಧ ಪ್ರಕಾರಗಳಿಗೆ ಸಂಬಂಧಿಸಿದಂತೆ ಸುಮಾರು ಐವತ್ತೆಂಟು ಸಾಹಿತ್ಯಕೃತಿಗಳು ಮುಮ್ಮಡಿಯವರಿಂದ ರಚನೆಯಾಗಿ ಸಾಹಿತ್ಯಕ್ಷೇತ್ರದಲ್ಲಿ ಅವರ ಹೆಸರನ್ನು ಶಾಶ್ವತಗೊಳಿಸಿವೆ. ರಸವಿದ್ಯೆಯನ್ನು ಬಲ್ಲವರು

ಮುಪ್ಪು ಸಾವುಗಳನ್ನು ಮೀರಿ ನಿಲ್ಲುವಂತೆ, ರಸಭರಿತ ಶ್ರೇಷ್ಠ ಕೃತಿರಚನೆಯಲ್ಲಿ ಸಿದ್ಧಹಸ್ತರಾದ ಕವಿಗಳ ಕೀರ್ತಿಕಾಯಕ್ಕೆ ಜರಾಮರಣಗಳ ಭಯವಿಲ್ಲವಷ್ಟೆ.

**ಜಯಂತಿ ತೇ ಸುಕೃತಿನೋ ರಸಸಿದ್ಧಾಃ ಕವೀಶ್ವರಾಃ**
**ನಾಸ್ತಿ ಯೇಷಾಂ ಯಶಃಕಾಯೇ ಜರಾಮರಣಜಂ ಭಯಮ್**

ಭರ್ತೃಹರಿಯ ಈ ಸೂಕ್ತಿಯು ಘೋಷಿಸುವಂತೆ ಮುಮ್ಮಡಿಯವರು ತಮ್ಮ ವೈವಿಧ್ಯಮಯ ಕೃತಿಗಳಿಂದ ಹಾಗೂ ಕವಿಗಳಿಗೆ, ವಿದ್ವಾಂಸರಿಗೆ, ಕಲಾವಿದರಿಗೆ ನೀಡಿದ ವಿಶೇಷ ಪ್ರೋತ್ಸಾಹಗಳಿಂದಲೂ, ಮೇಲಾಗಿ ಜನಪರವಾದ ಅಭಿವೃದ್ಧಿ ಕಾರ್ಯಗಳಿಂದಲೂ ಪರಮಾರವಂಶದ ಭೋಜರಾಜನಂತೆಯೇ ಸಾಂಸ್ಕೃತಿಕ ಜಗತ್ತಿನಲ್ಲಿ ಚಿರಂಜೀವಿಗಳಾಗಿದ್ದಾರೆ.

ಪರಮಾರವಂಶದ ಭೋಜರಾಜನು ಕ್ರಿ.ಶ. 1018 ರಿಂದ 1055 ರವರಗೆ ಮಾಳವ ರಾಜ್ಯದ ಅಧಿಪತಿಯಾಗಿ, ಅತ್ಯಂತ ಜನಪ್ರಿಯನಾಗಿದ್ದು ಸ್ವತಃ ವೈವಿಧ್ಯಮಯವಾದ ಸಂಸ್ಕೃತ ಕೃತಿಗಳನ್ನು ರಚಿಸಿದುದಲ್ಲದೆ ಕವಿಗಳಿಗೆ ವಿದ್ವಾಂಸರಿಗೆ ಆಶ್ರಯದಾತನೂ ಆಗಿದ್ದನು. ಅವನ ರಾಜಧಾನಿಯಾದ ಧಾರಾನಗರವು ಸರಸ್ವತಿಯ 'ಆವಾಸಸ್ಥಾನ'ವೆಂಬ ಪ್ರಸಿದ್ಧಿಯನ್ನು ಪಡೆದಿತ್ತು. ಕಾವ್ಯ, ವೈದ್ಯಶಾಸ್ತ್ರ, ದರ್ಶನ, ವ್ಯಾಕರಣ, ಯೋಗ, ಧನು ವಿದ್ಯೆ ಈ ಎಲ್ಲ ಸಾಹಿತ್ಯಪ್ರಕಾರಗಳಲ್ಲಿ ಭೋಜರಾಜನು ಕೃತಿಗಳನ್ನು ರಚಿಸಿದ್ದಾನೆ. ಭೋಜವಿರಚಿತವಾದ (1) ಚಂಪೂರಾಮಾಯಣವು ಗದ್ಯಪದ್ಯಗಳೆರಡೂ ಬೆರೆತ ಶೈಲಿಯಲ್ಲಿ ವಾಲ್ಮೀಕಿರಾಮಾಯಣದ ಕಥೆಯನ್ನು ಆಧರಿಸಿ ರಚಿಸಿರುವ ಚಂಪೂಕಾವ್ಯ (2) ಸರಸ್ವತೀಕಂಠಾಭರಣವು ಕಾವ್ಯವಿಮರ್ಶೆಯ ಗ್ರಂಥ (3) ಶೃಂಗಾರಪ್ರಕಾಶವು ರಸಗಳ ಸರಣಿಯಲ್ಲಿ ಶೃಂಗಾರ ರಸದ ಶ್ರೇಷ್ಠತೆಯನ್ನು ಸಾಧಿಸುವ ಅಲಂಕಾರ ಗ್ರಂಥವು(4) ಕವಿಕಂಠಾಭರಣವು ಕವಿಜನರಿಗೂ ಸಾಹಿತ್ಯದ ಇತರ ಲೇಖಕರಿಗೂ ಮಾರ್ಗದರ್ಶಕ ಗ್ರಂಥ(5) ರಾಜಮಾರ್ತಾಂಡವು ಪತಂಜಲಿಯ ಯೋಗಸೂತ್ರದ ಮೇಲಣ ವ್ಯಾಖ್ಯಾನ (6) ಸಮರಾಂಗಣ ಸೂತ್ರಧಾರವು ವಾಸ್ತುಶಿಲ್ಪಕ್ಕೆ ಸಂಬಂಸಧಿಸಿದ್ದು ನಗರ ನಿರ್ಮಾಣ, ಕೋಟೆಕೊತ್ತಲ, ದೇವಮಂದಿರಗಳ ನಿರ್ಮಾಣಕ್ರಮಗಳಿಗೆ ಸೀಮಿತವಾಗಿದೆ(7) ತತ್ತ್ವಪ್ರಕಾಶವು ಶೈವದರ್ಶನದ ಸಂಕ್ಷಿಪ್ತಸುಂದರ ನಿರೂಪಣೆ (8) ರಾಜಮೃಗಾಂಕವೆಂ ಕೃತಿಯು ಲೋಹಶಾಸ್ತ್ರಕ್ಕೆ ಸಂಬಂಧಿಸಿದ್ದು ಅದಿರುಗಳಿಂದ ಲೋಹವನ್ನು ತೆಗೆಯುವ ಕ್ರಮಗಳನ್ನೂ, ವಿವಿಧ ರೀತಿಯ ಔಷಧಗಳನ್ನು ಸಿದ್ಧಪಡಿಸುವ ವಿಧಾನಗಳನ್ನೊಳಗೊಂಡಿದೆ (9) ಯುಕ್ತಿಕಲ್ಪತರು- ಯುದ್ಧನೌಕೆಗಳ ನಿರ್ಮಾಣ, ಹಡಗು, ದೋಣಿಗಳ ವಿನ್ಯಾಸಗಳಿಗೆ ಸಂಬಂಧಿಸಿದೆ (10) ಧರ್ಮಶಾಸ್ತ್ರವೃತ್ತಿಯು ಕಾನೂನುವ್ಯವಸ್ಥೆಗೆ ಸಂಬಂಧಿಸಿದ

ಅಧಿನಿಯಮಗಳ ನಿರೂಪಣೆ (11) ತತ್ತ್ವಶಾರದಿಯು ಈಶ್ವರಕೃಷ್ಣನ' ಸಾಂಖ್ಯಕಾರಿಕೆ'ಗೆ ವಿವರಣೆಯಾಗಿದೆ.

ಭೋಜರಾಜನು ತನ್ನ ಆಳ್ವಿಕೆಯ ಸಂಭರ್ಭದಲ್ಲಿ ಈ ಮೊದಲು ಮಹಮದ್ ಘಜ್ನಿಯ ದಾಳಿಯಿಂದ ಶಿಥಿಲವಾಗಿದ್ದ ಜಗತ್ಪ್ರಸಿದ್ಧ ಸೋಮನಾಥ ದೇವಾಲಯವನ್ನು ದುರಸ್ತಿಗೋಳಿಸಿದನು. ಮಧ್ಯಪ್ರದೇಶದ ಭೂಪಾಲದ ಸಮೀಪ ಭೋಜನಪುರವೆಂಬ ನಗರವನ್ನು ನಿರ್ಮಿಸಿ ಹಲವಾರು ಸುಂದರ ದೇವಸ್ಥಾನಗಳನ್ನು ನಿರ್ಮಾಣ ಮಾಡಿಸಿದನು. ಎಲ್ಲಕ್ಕಿಂತಲೂ ಮಿಗಿಲಾಗಿ ಭೂಪಾಲದ ಬಳಿ ಹರಯುತ್ತಿದ್ದ 'ಬೇತ್ವಾ' ನದಿಗೆ ಅಣೆಕಟ್ಟನ್ನು ಕಟ್ಟಿಸಿ 'ಭೋಜಸರೋವರ'ವೆಂಬ ಜಲಾಶಯವನ್ನು ನಿರ್ಮಾಣ ಮಾಡಿ ಸಾವಿರಾರು ಎಕರೆ ಭೂಮಿಗೆ ನೀರು ಲಭಿಸುವಂತೆ ಮಾಡಿ ಕೃಷಿ ಆಂದೋಲನವನ್ನೇ ಮಾಡಿದವರು ಭೋಜಚಕ್ರವರ್ತಿ. ಇಂದಿಗೂ ಸಹ ಸಂಸ್ಕೃತ ಸಾಹಿತ್ಯಾಸಕ್ತರಿಗೆ ಭೋಜರಾಜನ ಆದರ್ಶಗಳನ್ನು ಬಿಂಬಿಸುವ ಕಥೆಗಳೆಲ್ಲವೂ ಅಚ್ಚುಮೆಚ್ಚಿನವಾಗಿಯೇ ಉಳಿದವೆ. ಮುಮ್ಮಡಿಯವರೂ ಸಹ ಭೋಜನಂತೆಯೇ ವೈವಿಧ್ಯಮಯ ಸಾಹಿತ್ಯ ರಚನೆಗಳಿಂದ, ಸಂಗೀತ ಕೃತಿಗಳಿಂದ ಕಲಾಪ್ರೇಮದಿಂದ ಮೈಸೂರು ಸಂಸ್ಥಾದ ಸಾಂಸ್ಕೃತಿಕ ಇತಿಹಾಸದಲ್ಲಿ ತಮ್ಮದೇ ಆದ ವಿಶೇಷ ಛಾಪು ಮೂಡಿಸಿದವರು. ಇವರು ರಚಿಸಿರುವ ಕನ್ನಡ ಮತ್ತು ಸಂಸ್ಕೃತ ಭಾಷೆಯಲ್ಲಿನ ಅಮೂಲ್ಯ ಕೃತಿಗಳನ್ನು ಇಲ್ಲಿ ಕಾಣಬಹುದು.

ಸಾಹಿತ್ಯಕ್ಷೇತ್ರಕ್ಕೆ ಮುಮ್ಮಡಿ ಕೃಷ್ಣರಾಜ ಒಡೆಯರ್ ರವರ ಕೊಡುಗೆ:

ಸಂಸ್ಕೃತ ಹಾಗೂ ಕನ್ನಡ ಭಾಷೆ ಸೇರಿದಂತೆ ಒಟ್ಟು ಐವತ್ತೆಂಟು ಕೃತಿಗಳನ್ನು ಮುಮ್ಮಡಿಯವರು ರಚಿಸಿದ್ದು ಅವು ಸ್ತೋತ್ರ, ಕಾವ್ಯರಚನೆ, ಶಾಸ್ತ್ರಾಧಾರಿತ ರಚನೆಗಳು, ವಿಶ್ವಕೋಶ ಮೊದಲಾದ ವಿವಿಧ ಪ್ರಕಾಗಳಿಗೆ ಸಂಬಂಧಿಸಿವೆ.

**(ಅ) ಸಂಸ್ಕೃತ ಭಾಷೆಯಲ್ಲಿ ರಚನೆಯಾಗಿರುವ ದೇವತಾಸ್ತೋತ್ರಗಳು :**

1. ಮೃತ್ಯುಂಜಯಶತಕಮ್ 2. ನಂಜುಂಡಶತಕಮ್
3. ಗಣೇಶರತ್ನಮಾಲಾ 4. ದೇವತಾಧ್ಯಾನಮಾಲಿಕಾ
5. ಚಾಮುಂಡಾತ್ರಿಶತಿ 6. ಗಣಪತಿತ್ರಿಶತಿ
7. ಶ್ರೀಕಂಠೇಶ್ವರತ್ರಿಶತಿ 8.ಮಹಾವಿಷ್ಣುತ್ರಿಶತಿ
9.ವಿಷ್ಣುನಾಮಪಂಚಾಶತ್ 10.ಸೂರ್ಯಚಂದ್ರಸ್ತೋತ್ರಮ್
11.ರಾಮಕೃಷ್ಣಸ್ತೋತ್ರಮ್ 12.ಶಂಕರನಾರಾಯಣಸ್ತೋತ್ರಮ್

13.ಚಾಮುಂಡಾಮಂಗಳಮಾಲಿಕಾ 14. ಅರ್ಕಪುಷ್ಕರಿಣೀಮಾಹಾತ್ಮ್ಯಮ್
15.ಅಖಂಡಕಾವೇರೀಮಾಹಾತ್ಮ್ಯಮ್ 16. ನವಗ್ರಹಪೂಜಾಮಂಜರೀ
17.ಮಹಾಸಂಕಲ್ಪ 18. ದೇವತಾನಾಮಕುಸುಮಮಂಜರೀ

(ಆ) ಕಾವ್ಯ ರಚನೆಗಳು(ಸಂಸ್ಕೃತದಲ್ಲಿ) :

19. ರಾಮಕಥಾಪುಷ್ಪಮಂಜರೀ 20. ಕೃಷ್ಣಕಥಾಮಂಜರೀ
21. ಸೂರ್ಯಚಂದ್ರವಂಶಾವತರಣಮ್ 22. ಆರ್ಯರಾಮಾಯಣಮ್
23. ಸೂರ್ಯಚಂದ್ರವಂಶಾವಳೀ (ರಾಮಾಯಣ, ಮಹಾಭಾರತಗಳಿಂದ ಆಯ್ದ ನೂರು ಪ್ರಕರಣಗಳೂ ಯದುವಂಶದ ಮೂಲ ಪುರುಷರುಗಳಾದ ಯದುರಾಯ, ಕೃಷ್ಣರಾಯರುಗಳ ಶೌರ್ಯಪ್ರತಾಪಗಳ ವಿವರಗಳಿವೆ.

ಸಂಸ್ಕೃತಮೂಲವನ್ನು ಆಧರಿಸಿ ಸಾಹಿತ್ಯದ ವಿವಿಧ ಪ್ರಕಾರಗಳಿಗೆ ಸಂಬಂಧಿಸಿದ ಸಂಸ್ಕೃತಭಾಷೆಯಲ್ಲಿಯೇ ರಚಿತವಾದ ಗ್ರಂಥಗಳು:

24. ಶ್ರೀತತ್ತ್ವನಿಧಿ (ದೇವತಾವಿಷಯಕ ಸಚಿತ್ರ ವಿಶ್ವಕೋಶ) (ಶಕ್ತಿ–ವಿಷ್ಣು–ಶಿವ–(ಬ್ರಹ್ಮ–ಗ್ರಹ–ವೈಷ್ಣವ–ಶೈವ–ಆಗಮ–ಕೌತುಕ– ಇವು ನವನಿಧಿಗಳು)
25. ಗಣಿತಸಂಗ್ರಹ
26. ಶ್ರೀಚಕ್ರಸಂಗ್ರಹಮಂಜರಿ
27. ಸಂಖ್ಯಾರತ್ನಮಾಲಾ (ಒಂದರಿಂದ ಇಪ್ಪತ್ತರವರೆಗೂ ಜಗತ್ತಿನಲ್ಲಿ ಕಂಡು ಬರುವ ವಿಷಯ ವೈವಿಧ್ಯ ಸೂಚಕ ವಿಷಯ ಕೋಶ)
28. ಸಂಖ್ಯಾರತ್ನಕೋಶ (ಲಘು ವಿಶ್ವ ಕೋಶ)
29. ಸ್ವರಚೂಡಾಮಣಿ ( ಸಂಗೀತ ಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥ)
30. ಗ್ರಹಣದರ್ಪಣಮ್ 31. ಶಕಕಾಲನಿರ್ಣಯ
32. ಗ್ರಹಣದರ್ಪಣಮ್ 33. ದಶಮವಿಭಾಗಪದಕಮ್
34. ಚತುರಂಗಸಾರಸರ್ವಸ್ವಮ್
35. ಸೌಗಂಧಿಕಾಪರಿಣಯ (ಸಂಸ್ಕೃತ) ಗದ್ಯಕಾವ್ಯ. ಇದು ಕನ್ನಡ ಮೂಲದಿಂದ ಸಂಸ್ಕೃತಭಾಷೆಗೆ ಅನುವಾದಗೊಂಡಿರುವುವಾಗಿ ತಿಳಿದು ಬಂದಿರುತ್ತದೆ

3

'ಕೃಷ್ಣರಾಜಪ್ರಭಾವವೋದಯ' ವೆಂಬ ಪದ್ಯಕಾವ್ಯಕ್ಕೆ ಶ್ರೀನಾಡಕೃಷ್ಣ ಶರ್ಮನೆಂಬುವನು 'ಭಾವಬೋಧಕಲಿಕಾ' ಎಂಬ ವ್ಯಾಖ್ಯಾನವನ್ನು ಬರೆದಿರುವನು. ಈ ವ್ಯಾಖ್ಯಾನವನ್ನು ರಚಿಸುವ ಮೊದಲು ಶ್ರೀಮುಮ್ಮಡಿ ಕೃಷ್ಣರಾಜವಿರಚಿತ ಸೌಗಂಧಿಕಾಪರಿಣಯದ ಸಂಸ್ಕೃತಾನುವಾದವನ್ನೂ 'ಮದಾಲಸಾಪರಿಣಯ' ವೆಂಬ ನಾಟಕವನ್ನು ರಚಿಸಿರುವುದಾಗಿ 'ಭಾವಬೋಧಕಲಿಕಾದಿ' ಉಪಕ್ರಮದಲ್ಲಿ ಸೂಚಿತವಾಗಿದೆ.

(ಈ) ಕನ್ನಡದ ಭಾಷೆಯಲ್ಲಿ ರಚಿತವಾದ ಕೃತಿಗಳು :

36. ಸೌಗಂಧಿಕಾಪರಿಣಯ – ಭಾಮಿನೀಷಟ್ಪದಿಯಲ್ಲಿ
37. ವತ್ಸರಾಜಕಥಾ – ಕನ್ನಡ ರಚಿತವಾಗಿರುವ ಪದ್ಯಕಾವ್ಯ
38. ಕೃಷ್ಣಕಥಾಸಂಗ್ರಹ – ಭಾಗವತ ದಶಮಸ್ಕಂಧದಿಂದ ಆಯ್ದ ಕಥೆಗಳು
39. ಸಾರಸಂಗ್ರಹಭಾರತ – ಭರತಶಾಸ್ತ್ರ ಆಧಾರಿತ ಸಂಗೀತ–ನೃತ್ಯ–ಗ್ರಂಥ
40. ಪರಿಮಳ ಪಾರಿಜಾತ – (ಸುಗಂಧದ್ರವ್ಯ ವಿಚಾರ)
41. ಕೃಷ್ಣರಾಜವಾಣೀವಿಲಾಸರತ್ನಾಕರ – ಕಾಳಿದಾಸನ ನಾಟಕತ್ರಯ ಕನ್ನಡ ಅನುವಾದ
42. ಸಾರಸಂಗ್ರಹ ಶ್ರೀರಾಮಕಥಾಕಲ್ಪವೃಕ್ಷ (ವಾಲ್ಮೀಕಿ ರಾಮಾಯಣ, ಪುರಾಣಗಳಲ್ಲಿ ಬರುವ ಶ್ರೀರಾಮನ ಕಥೆಗಳು)
43. ಕೃಷ್ಣರಾಜವಾಣೀವಿಲಾಸಟೀಕಾ (ಭಾಗವತಕ್ಕೆ ಶ್ರೀಧರಾಚಾರ್ಯರು ರಚಿಸಿರುವ ವ್ಯಾಖ್ಯಾನದ ಕನ್ನಡ ಟೀಕೆ)
44. ಕೃಷ್ಣರಾಜವಾಣೀವಿಲಾಸಟೀಕಾ( ಮಹಾಭಾರತದ ಮೇಲಣ ಕನ್ನಡ ವ್ಯಾಖ್ಯಾನ)
45. ದೇವೀಮಾಹತ್ಮ್ಯ – ಮಾರ್ಕಂಡೇಯಪುರಾಣದ 'ಸಪ್ತಶತೀ' ಮೇಲಣ ಕನ್ನಡ ವ್ಯಾಖ್ಯಾನ
46. ಹರಿಶ್ಚಂದ್ರೋಪಾಖ್ಯಾನ – ಮಾಹಾಭಾರತ ವನಪರ್ವದಲ್ಲಿನ ಹರಿಶ್ಚಂದ್ರೋಪಾಖ್ಯಾನಕ್ಕೆ ಕನ್ನಡ ವ್ಯಾಖ್ಯಾನ
47. ಮರುಶತಕ – ರತಿರಹಸ್ಯ

48. ಕಕ್ಕೋಕಶಸ್ತ್ರಟೀಕೆ
49. ಶಂಕರಸಂಹಿತಾ – ಸ್ಕಾಂದಪುರಾಣ, ಸ್ಕಾಂದಪುರಾಣದಲ್ಲಿನ ಶಂಕರಸಂಹಿತೆಗೆ ಕನ್ನಡ ವ್ಯಾಖ್ಯಾನ
50. ಆಧ್ಯಾತ್ಮರಾಮಾಯಣ– ಕನ್ನಡ ವ್ಯಾಖ್ಯಾನ
51. ಪಂಚತಂತ್ರಕಥೆಗಳು
52. ಉಮಾ–ಮಹೇಶ್ವರಸಂವಾದ – ಬ್ರಹ್ಮಾಂಡಪುರಾಣದಲ್ಲಿನ 'ಶಂಕರಸಂಹಿತಾ' ಭಾಗಕ್ಕೆ ಕನ್ನಡ ವ್ಯಾಖ್ಯಾನ
53. ಅಧ್ಯಾತ್ಮರಾಮಾಯಣ –ಕನ್ನಡ ವಿವರಣೆ
54. ಭಕ್ತಿವಿಲಾಸದರ್ಪಣ
55. ಭಾಮಾಕಲಾಪ – 'ಯಕ್ಷಗಾನ'– ದಕ್ಷಿಣಕನ್ನಡದಲ್ಲಿ ಪ್ರಚಲಿತವಿರುವ ನೃತ್ಯರೂಪಕ
56. ವಂಶಾವತರಣವೈಭವಗದ್ಯ

**(ಉ) ಕೋಶಗ್ರಂಥಗಳು:**

57. ಚಾಮುಂಡಾನಿಘಂಟು
58. ಮಹಾಕೋಶಸುಧಾಕರ

ಮುಮ್ಮಡಿಯವರ ಸಂಸ್ಕೃತ ಸಾಹಿತ್ಯಕೃತಿಗಳೆಲ್ಲವೂ ಉದ್ದೇಶಪೂರ್ವಕವಾಗಿಯೇ ಕನ್ನಡ ಲಿಪಿಯಲ್ಲಿ ಬರೆಯಲ್ಪಟ್ಟವೆ. ಕಲ್ಲಚ್ಚು ಮುದ್ರಣಾ ಕೌಶಲ್ಯವು ಈಗಷ್ಟೇ ರೂಢಿಗೆ ಬಂದಿದ್ದು ಮೈಸೂರಿನ ಅರಮನೆಯ ಆವರಣದಲ್ಲಿಯೇ ಇಂತಹ ಒಂದು ಮುದ್ರಣಾಲಯವನ್ನು ಮುಮ್ಮಡಿಯವರು ಸ್ಥಾಪನೆ ಮಾಡಿಸಿದ್ದರು. ಅವರ ಕೃತಿಗಳಲ್ಲಿನ ಹಾಗೂ ಅವರ ಪ್ರೋತ್ಸಾಹದಿಂದ ರಚನೆಗೊಂಡ ಕವಿಗಳ, ವಿದ್ವಾಂಸರ ಕೃತಿಗಳನ್ನೂ ಸಹ ಇದೇ ಕಲ್ಲಚ್ಚು ಮುದ್ರಣಾಲಯದಲ್ಲಿ ಮುದ್ರಿಸಲಾಗುತ್ತಿತ್ತು.

ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ನೆರವೇರಿಸಿದ ದಾನ – ಧರ್ಮಕಾರ್ಯಗಳು :

ಪ್ರಜೆಗಳ ಸುಖವೇ ರಾಜನಾದವನ ಸುಖ. ಪ್ರಜೆಗಳ ಹಿತವೇ ರಾಜನ ಹಿತ. ಹೀಗೆಂಬುದಾಗಿ ಕೌಟಿಲ್ಯನು ತನ್ನ ಅರ್ಥಶಾಸ್ತ್ರದ ಪ್ರಥಮ ಅಧಿಕರಣದಲ್ಲಿಯೇ

ಪ್ರಭುವಾದವನ ಜೀವನ ಧ್ಯೇಯವನ್ನು ಎತ್ತಿ ಹಿಡಿಯುತ್ತಾ ನಿರೂಪಿಸಿದ್ದಾನೆ–

**ಪ್ರಜಾಸುಖೇ ಸುಖಂ ರಾಜ್ಞಃ ಪ್ರಜಾನಾಂ ಚ ಹಿತೇ ಹಿತಮ್**
**ನಾತ್ಮಪ್ರಿಯಂ ಹಿತಂ ರಾಜ್ಞಃ ಪ್ರಜಾನಂತು ಪ್ರಿಯಂ ಹಿತಮ್**

ಬ್ರಿಟಿಷರು ನೀಡುತ್ತಿದ್ದ ವಾರ್ಷಿಕ ಅನುದಾನದಲ್ಲಿ ಅರಮನೆಯ ಖರ್ಚನ್ನು ನಿಭಾಯಿಸಿ ಉಳಿದ ಹಣವನ್ನು ಮುಮ್ಮಡಿಯವರು ದಾನಧರ್ಮ ಕಾರ್ಯಗಳಲ್ಲೂ, ಸಾಹಿತ್ಯ ಸಂಪತ್ತಿನ ಅಭಿವೃದ್ಧಿಗಾಗಿಯೂ, ಸಂಗೀತ, ಚಿತ್ರಕಲೆಗಳನ್ನು ಪ್ರೋತ್ಸಾಹಿಸಿ ಬೆಳಸುವುದಕ್ಕಾಗಿಯೂ ವಿನಿಯೋಗಿಸುತ್ತಿದ್ದರು. ಮೈಸೂರು ಸಂಸ್ಥಾನದ ಸಾಂಸ್ಕೃತಿಕಕ್ಷೇತ್ರದಲ್ಲಿ ಮಹಾ ಆಂದೋಲನವೇ ಮುಮ್ಮಡಿಯವರ ಕಾಲದಲ್ಲಿ ಘಟಿಸಿದ್ದು ಮುಂದಿನ ಪಂಕ್ತಿಗಳಲ್ಲಿ ಈ ಎಲ್ಲದರ ವಿಸ್ತೃತ ವಿವರಣೆ ನೀಡಗಾಗಿದೆ.

ಒಂಭತ್ತು ಬಗೆಯ ದಾನ–ಧರ್ಮಗಳು ಲೋಕೋಪಕಾರಗಳು : ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್ ರವರು ತಮ್ಮ ಬದುಕಿನುದ್ದಕ್ಕೂ ಮಾಡಿದ ದಾನಗಳನ್ನು 'ನವರತ್ನ' ಗಳೆಂದು ಮೈಸೂರಿನ ಅಂಬಾವಿಲಾಸ ಅರಮನೆಯ ಹಿಂಭಾಗದಲ್ಲಿರುವ ಪ್ರಸನ್ನಕೃಷ್ಣಸ್ವಾಮಿ ದೇವಸ್ಥಾನದ ಶಿಲಾಶಾಸನವೊಂದು ದಾಖಲಿಸಿದೆ. ಕನ್ನಡ ಲಿಪಿಯಲ್ಲಿರುವ ಈ ಶಾಸನದಲ್ಲಿ ಶ್ರೀತತ್ತ್ವನಿಧಿಯ ಪ್ರಥಮ ಸಂಪುಟ ಶಕ್ತಿನಿಧಿಯ ಮಂಗಳಶ್ಲೋಕವನ್ನೇ ಶಾಸನದ ಮಂಗಳಶ್ಲೋಕವಾಗಿ ಉಲ್ಲೇಖಿಸಲಾಗಿದೆ.

**1. ಭೂಷಾರತ್ನ :** ಕೆರೆಯ ನೀರನು ಕೆರೆಗೆ ಚೆಲ್ಲುವಂತೆ ಹರಿಹರರ ಕರುಣೆಯಿಂದ ದೊರೆತ ಸಂಪತ್ತನ್ನು ಮೈಸೂರಿನ ಸುತ್ತಮುತ್ತಲ ಪ್ರಮುಖ ದೇವಸ್ಥಾನಗಳಿಗೆ ನಿತ್ಯ ಹಾಗೂ ವಿಶೇಷ ಸಂದರ್ಭಗಳಲ್ಲಿ ದೇವರನ್ನು ಅಲಂಕರಿಸಲು ಆಭರಣಗಳನ್ನು ಕೊಡುಗೆಯಾಗಿ ನಂಜನಗೂಡಿನ ನಂಜುಂಡೇಶ್ವರ, ಮೇಲುಕೋಟೆಯ ಚೆಲುವನಾರಾಯಣಸ್ವಾಮಿ, ಚಾಮುಂಡಿಬೆಟ್ಟದಲ್ಲಿನ ಶ್ರೀ ಚಾಮುಂಡೇಶ್ವರೀ ದೇವಿಯವರಿಗೆ ರತ್ನಖಚಿತ ಕಿರೀಟಗಳು (ಮುಡಿ) ಇಂದಿಗೂ ಸಹ ಇವು ಮುಮ್ಮಡಿರವರ ದೇವರ ಮುಡಿಯನ್ನು ಮುಮ್ಮಡಿಯವರ ದಾನವನ್ನು ಸಾರಿ ಹೇಳುತ್ತಿವೆ.

**2. ದೇಶರತ್ನ :** ಹಲವಾರು ಹೊಸ ಹೊಸ ಊರುಗಳನ್ನು ನಿರ್ಮಾಣ ಮಾಡಿದರು. ಆಯಾ ಜನಾಂಗಕ್ಕನುಗುಣವಾಗಿ ಕೇರಿಗಳು ನಿರ್ಮಾಣಗೊಂಡವು. ಶ್ರೀಮುಮ್ಮಡಿ ಕೃಷ್ಣರಾಜ ಒಡೆಯರ್ ತಾವು ಜನಿಸಿದ ಸ್ಥಳ ಹಾಗೂ ತಮ್ಮ ತಾಯಿಯವರ ತವರೂರಾದ 'ಅರಿಕುಠಾರ' ಎಂಬ ಸಣ್ಣ ಹಳ್ಳಿಗೆ ಇತರ ಭಾಗಗಳನ್ನು

ಸೇರಿಸಿ 'ಚಾಮರಾಜನಗರ' ಎಂಬುದಾಗಿ ತಮ್ಮ ತಂದೆ ಖಾಸ ಚಾಮರಾಜ ಒಡೆಯರ್ ರವರ ನೆನಪಿನಲ್ಲಿ ಹೆಸರನ್ನು ನೀಡಿ ಅಭಿವೃದ್ಧಿಪಡಿಸಿದರು.

3. ಸೇವಾರತ್ನ : ಮೈಸೂರು ಸಂಸ್ಥಾನದ ಪ್ರಮುಖ ಸ್ಥಳಗಳಲ್ಲಿ ದೇವಸ್ಥಾನಗಳನ್ನೂ, ಅನ್ನಸತ್ರಗಳನ್ನೂ ಕಟ್ಟಿಸಿದರರು. ಶಿಥಿಲಾವಸ್ಥೆಯಲ್ಲಿದ್ದ ಪುರಾತನ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿದರು. ಅವುಗಳಲ್ಲಿ ಮುಖ್ಯವಾದವು ತಲಕಾಡಿನ ವೈದ್ಯನಾಥೇಶ್ವರ, ಮುಡುಕುತೊರೆಯ ಮಲ್ಲಿಕಾರ್ಜುನಸ್ವಾಮಿ, ಬಿಳಿಗಿರಿಬೆಟ್ಟದ ಮೇಲಣ ರಂಗನಾಥಸ್ವಾಮಿ, ಸೋಸಲೆಯ ಹೊನ್ನಾದೇವಿ, ಮೂಗೂರಿನ ತಿಬ್ಬಾದೇವಿ ಇವೆಲ್ಲವೂ ಇಂದು ನೆಚ್ಚಿನ ಯಾತ್ರಾಸ್ಥಳಗಳಾಗಿರುವುದು ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ ಶ್ರದ್ಧೆ ಭಕ್ತಿಗಳ ಪರಿಣಾಮ ದೇವರ ಸೇವೆಗಾಗಿ ಇಂದಿಗೂ ಸಹ ಜನಸಾಮಾನ್ಯರು ಅಧಿಕ ಸಂಖ್ಯೆಯಲ್ಲಿ ಈ ಸ್ಥಳಗಳಿಗೆ ಹೋಗಿ ದರ್ಶನಾಶೀರ್ವಾದ ಪಡೆದು ಧನ್ಯರಾಗುತ್ತಾರೆ.

4. ದಾನರತ್ನ: ಮೈಸೂರಿನ ಸುತ್ತಮುತ್ತ ವಿದ್ವಾಂಸರುಗಳಿಗೆ ಬಡವರಿಗೆ ವೃತ್ತಿಸೌಕರ್ಯವನ್ನು ಕಲ್ಪಿಸಿ ಅಗ್ರಹಾರಗಳನ್ನು ಸ್ಥಾಪಿಸಿ ಯೋಗ್ಯರಾದ ಪ್ರತಿಭಾನ್ವಿತ ವ್ಯಕ್ತಿಗಳಿಗೆ ಭೂದಾನ, ಗ್ರಾಮದಾನಗಳನ್ನು ಸಮರ್ಪಣೆ ಮಾಡಿದರು ನಂಜನಗೂಡು ತಾಲ್ಲೂಕಿನ ಕಳಲೆಯ ಕೃಷ್ಣರಾಜೇಂದ್ರಪುರ ಅಗ್ರಹಾರ ,ಯಡತೋರೆ ಅಥವಾ ಕೃಷ್ಣರಾಜನಗರದ ಬಳಿ ದೇವೀರಾಂಬಾ ಅಗ್ರಹಾರ, ಮಳವಳ್ಳಿಯ ಬಳಿ ದೇವಲಾಂಬಾ ಆಗ್ರಹಾರ, ಹೊಳೆನಸೀಪುರದ ಬಳಿ ದೇವರಾಜಾಂಬಾ ಅಗ್ರಹಾರ, ಮೈಸೂರಿನಲ್ಲಿ ಕೆಂಪುನಂಜಾಂಬಾ ಅಗ್ರಹಾರ, ರಮಾವಿಲಾಸ ಅಗ್ರಹಾರ, ಸೀತಾವಿಲಾಶ ಅಗ್ರಹಾರ, ಮೊದಲಾದವು. ಸ್ಥಾಪನೆಗೊಂಡವು ಈ ಅಗ್ರಹಾರಗಳಲ್ಲಿ ನಾನಾವಿಧದ ಶಸ್ತ್ರಸಂಪನ್ನರಿಗೆ ಅವರ ಯೋಗ್ಯತಾನುಸಾರ ವೃತ್ತಿಗಳನ್ನೂ ಅದಕ್ಕೆ ತಕ್ಕ ವೇತನಾದಿಗಳನ್ನು ನಿಗಧಿಪಡಿಸಿ ಅವರುಗಳಿಂದ ರಾಜ್ಯಕ್ಕೆ ನಾನಾ ವಿಧದ ಸೇವೆಗಳು ಲಭಿಸುವಂತೆ ಏರ್ಪಾಡು ಮಾಡಿದರು.

5. ಪ್ರತಿಷ್ಠಾರತ್ನ : ಮೈಸೂರಿನ ಚಾಮುಂಡಿಬೆಟ್ಟದಲ್ಲಿನ ದೇವಸ್ಥಾನಕ್ಕೆ ಗೋಪುರವನ್ನು ಇಷ್ಟದೇವರಾದ ನಂಜನಗೂಡಿನ ಶ್ರೀಕಂಠೇಶ್ವರಸ್ವಾಮಿ ದೇವಸ್ಥಾನಕ್ಕೆ ಹಾಗೂ ಚಾಮರಾಜನಗರದ ಚಾಮರಾಜಸ್ವಾಮಿ ದೇವಸ್ಥಾನಕ್ಕೆ ಗೋಪುರವನ್ನ, ಮೈಸೂರಿನ ಲಕ್ಷ್ಮೀನಾರಾಯಣ ಸ್ವಾಮಿ ದೇವಸ್ಥಾನಕ್ಕೆ ಗೋಪುರಗಳನ್ನು ಪ್ರತಿಷ್ಠಾಪನೆ ಮಾಡಿಸಿದರು. ಇವುಗಳ ಜೊತೆಗೆ ತಿರುಮಕೂಡಲಿನಲ್ಲಿ ಚನ್ನಬಸವೇಶ್ವರ, ಮೈಸೂರಿನಲ್ಲಿ ಶ್ವೇತವರಾಹಸ್ವಾಮಿ, ತ್ರಿಣೇಶ್ವರ, ಪ್ರಸನ್ನಕೃಷ್ಣಸ್ವಾಮಿ, ಶ್ರೀರಂಗಪಟ್ಟಣದಲ್ಲಿ ಲಕ್ಷ್ಮೀನರಸಿಂಹ ದೇವರುಗಳ ವಿಗ್ರಹಗಳನ್ನು ಪ್ರತಿಷ್ಠಾಪನೆ ಮಾಡಿಸಿದರು.

**6. ಉಪಕಾರರತ್ನ :** ಪ್ರಜೆಗಳ ಅನುಕೂಲಕ್ಕಾಗಿ ನದಿಗಳ ಮೇಲೆ ಸೇತುವೆ, ಸ್ನಾನಘಟ್ಟಗಳು, ಸೋಪಾನಗಳು, ರಸ್ತೆಗಳಲ್ಲಿ ಅಲ್ಲಲ್ಲಿ ಸಾಲುಮರಗಳು, ಉದ್ಯಾನವನಗಳು, ಅನ್ನಸತ್ರಗಳು, ಧರ್ಮಶಲೆ, ಕೆರೆಕೊಳಗಳನ್ನು ನಿರ್ಮಾಣ ಮಾಡಿಸಿದರು. ಕಾವೇರಿ, ಲೋಕಪಾವನಿ, ಅರ್ಕಾವತಿ ನದಿಗಳಿಗೆ ಸೇತುವೆ, ಕೃಷ್ಣರಾಜಕಟ್ಟೆ, ಲಕ್ಷ್ಮಣತೀರ್ಥಕಟ್ಟೆ, ಕಪಿಲಾನದಿ ಕಟ್ಟೆಗಳು, ಪಶ್ಚಿಮವಾಹಿನಿಯಲ್ಲಿ ಸೋಪಾನ ಮತ್ತು ಸಂಧ್ಯಾಮಂಟಪ, ಹಾಗೂ ಧರ್ಮಶಲೆಗಳು, ಮೈಸೂರಿನಲ್ಲಿ ಕಾರಂಜಿಕೆರೆ, ಬೆಂಗಳೂರಿನ ದೊಡ್ಡಕೆರೆ, ಚಿಕ್ಕಬಳ್ಳಾಪುರದ ಬಳಿ ಪನಸಬಾವಿಯೆಂಬ ಕೆರೆ ಮೊದಲಾದವು ಮುಮ್ಮಡಿ ಕೃಷ್ಣರಾಜ ಒಡೆಯರ್ ಕಾಲದಲ್ಲಿ ನಿರ್ಮಾಣಗೊಂಡಂತಹವು.

**7. ಧರ್ಮರತ್ನ:** ತೀರ್ಥಕ್ಷೇತ್ರಗಳಲ್ಲಿ ಯಾತ್ರಿಕರ ಸಲುವಗಿ ಉಚಿತವಾಗಿ ಅನ್ನಸಂತರ್ಪಣೆಯನ್ನು ಮಾಡಿದರು. ಕಾಶಿ ಮತ್ತು ತಿರುಪತಿಗಳಲ್ಲಿ ಇಂದಿಗೂ ಸಹ ಇದು ಮುಂದುವರೆದುಕೊಂಡು ಬಂದಿದೆ.

**8. ಕೀರ್ತಿರತ್ನ :** ತಮ್ಮ ಯಶಸ್ಸು ಬಹುಕಾಲ ಉಳಿಯಲೆಂಬ ಉದ್ದೇಶದಿಂದ ಕೃಷ್ಣರಾಜವರಹವೆಂಬ ಚಿನ್ನದ ರೂಪಾಯಿ, ಬಹದ್ದುರೀ ವರಹವೆಂಬ ಚಿನ್ನದ ನಾಣ್ಯವನ್ನು ತುರುಬಿಕಾಸೆಂಬ ಬೆಳ್ಳಿಯನಾಣ್ಯವನ್ನು ಟಂಕಿಸಿದರು.

**9. ಸಾರಸ್ವತರತ್ನ :** ಧಾರ್ಮಿಕ ವಿಚಾರಗಳನ್ನು ಕುರಿತಂತೆ ಸ್ವತಃ ಅನೇಕ ಗ್ರಂಥಗಳನ್ನು ರಚಿಸಿ, ಅರಮನೆಯ ಆವರಣದಲ್ಲಿಯ ಮುದ್ರಣಶಾಲೆಯಲ್ಲಿಯೇ ಕಲ್ಲಚ್ಚು ಪ್ರತಿಗಳನ್ನು ಮಾಡಿಸಿ ಆಸಕ್ತರಿಗೆ ವಿತರಣೆ ಮಾಡಿದರು. ಇಂತಹ ಕೃತಿಗಳಲ್ಲಿ ಶ್ರೀತತ್ತ್ವನಿಧಿಯು ಪ್ರಮುಖವಾದುದು ಮುಮ್ಮಡಿಯವರ 'ವಂಶಾವತರಣ ವೈಭವಗದ್ಯ'ದಲ್ಲಿ ಶ್ರೀತತ್ವವನಿಧ್ಯಾದ್ಯನೇಕ ಗ್ರಂಥನಿರ್ಮಾಣ ಪ್ರಕಾಶಿತ ಸಕಲಶಾಸ್ತ್ರಾರ್ಥ ಪಾಂಡಿತ್ಯವೈಭವಃ ಎಂಬ ನಿರೂಪಣೆಯಿದೆ. ಮೈಸೂರಿನ ಸಾಂಸ್ಕೃತಿಕ ಪರಂಪರೆಗೆ ಮುಮ್ಮಡಿ ಕೃಷ್ಣ ರಾಜ ಒಡೆಯರ್‌ರವರ ಕೊಡುಗೆಯನ್ನು ಮುಂದೆ ವಿವರಿಸಲಾಗಿದೆ.

ಇಂದು ಮೈಸೂರು ತನ್ನದೇ ಆದ ಸಾಂಸ್ಕೃತಿಕ ಮಹತ್ತ್ವವನ್ನು ಗಳಿಸಿಕೊಂಡಿರುವಲ್ಲಿ ಮುಮ್ಮಡಿಯವರ ಪಾತ್ರವು ಬಹಳ ದೊಡ್ಡದು. ಸುಮಾರು ಎಪ್ಪತ್ತೈದು ವರ್ಷಗಳಷ್ಟು ದೀರ್ಘಕಾಲದ ಅವರ ಆಳ್ವಿಕೆಯೂ ಜಗತ್ತಿನಲ್ಲಿಯೇ ಒಂದು ಅಪರೂಪದ ಘಟನೆಯೇಂದೇ ಹೇಳಬೇಕಾಗುತ್ತದೆ. ಮೈಸೂರಿನ ಒಡೆಯರ್ ಮನೆತನದಲ್ಲಿಯೇ ದೀರ್ಘಾವಧಿಯ ರಾಜರಾಗಿದ್ದವರು ಇವರೊಬ್ಬರೇ.

ಸ್ವತಃ ಸಾಹಿತ್ಯ ಸಂಗೀತಾದಿ ಕಲೆಗಳಲ್ಲಿ ಗಾಢಾಸಕ್ತಿಯನ್ನು ಹೊಂದಿದ್ದ ಮುಮ್ಮಡಿಯವರ ಕಾಲವು ಕನ್ನಡ ನಾಡಿನ ಸಾಂಸ್ಕೃತಿಕ ಇತಿಹಾಸದಲ್ಲಿ ಮಹತ್ತ್ವದ

ಅವಧಿ. ಕನ್ನಡ ಸಾಹಿತ್ಯಲೋಕದಲ್ಲಂತೂ ಇವರ ಅವಧಿಯು ಅರುಣೋದಯದ ಕಾಲ. ಸಂಸ್ಕೃತ ಸಾಹಿತ್ಯ ಸರಸ್ವತಿಯು ಕನ್ನಡಭಷೆಯಲ್ಲಿ ಅವತರಿಸಿ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದಂತಹ ಪರ್ವ ಸಮಯ. ಕನ್ನಡದ ನೆಲವನ್ನು ವೈಭವದಿಂದ ಆಳಿದ ಚಾಲುಕ್ಯ ಚಕ್ರವರ್ತಿಯಾದ ಇಮ್ಮಡಿಯ ಪುಲಿಕೇಶಿ, ರಾಷ್ಟ್ರಕೂಟರ ನೃಪತುಂಗ, ಹೊಯ್ಸಳೇಶ್ವರ ವಿಷ್ಣುವರ್ಧನ, ವಿಜಯನಗರದ ಕೃಷ್ಣದೇವರಾಯ ಇವರುಗಳಂತೆ ರಣರಂಗದಲ್ಲಿ ಪರಾಕ್ರಮವನ್ನು ಮೆರೆದು ಸಮರವೀರರಾಗಿ ಮುಮ್ಮಡಿಯವರು ಶೋಭಿಸದಿದ್ದರೂ ಸಾಂಸ್ಕೃತಿಕವಾಗಿ ಈ ಎಲ್ಲ ಚಕ್ರವರ್ತಿಗಳಿಗೆ ಸಮಾನವಾಗಿ ನಿಲ್ಲಬಲ್ಲರು. ಅಜ್ಜಿಲಕ್ಷ್ಮೀಅಮ್ಮಣ್ಣಿಯವರು ಇವರಿಗೆ ಬಾಲ್ಯದಿಂದಲೇ ಇತ್ತ ಸಂಸ್ಕಾರ, ಕೋಡಿಸುತ್ತಾ ಬಂದಂತಹ ಸಂಗೀತ ಸಾಹಿತ್ಯ ಶಿಕ್ಷಣಗಳು ಇವರ ವ್ಯಕ್ತಿತ್ವದಲ್ಲಿನ ಕಾರಯತ್ರೀ–ಭಾವಯತ್ರೀ ಪ್ರತಿಭೆಗಳೆರಡೂ ಪುಟಿದೇಳುವಂತೆ ಮಾಡಿದವು. ತಮ್ಮ ಜೀವನದುದ್ದಕ್ಕೂ ಇವರುನೆರವೇರಿಸಿದ ಜನಪರವಾದ ಕಾರ್ಯಗಳ ಬಗ್ಗೆಯೂ ಸಾಂಸ್ಕೃತಿಕ ಸಾಧನೆಗಳ ಬಗ್ಗೆಯೂ ಸಂಕ್ಷಿಪ್ತವಾಗಿಯಾದರೂ ಮುಂದೆ ಕೆಲವು ವಿಷಯಗಳನ್ನು ನೀಡಲಾಗಿದೆ.

ಸಾಹಿತ್ಯ ವಿಮರ್ಶಕರುಗಳಿಂದ ಮುಮ್ಮಡಿಯವರ ಕಾಲಾವಧಿಯನ್ನು ಹೊಸಗನ್ನಡ ಸಾಹಿತ್ಯದ ಅರುಣೋದಯವೆಂದು ಗುರುತಿಸಲಾಗಿದ್ದು ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಬಹಳಷ್ಟು ಸಂಸ್ಕೃತ ಮೂಲದ ಶ್ರೇಷ್ಠ ಕೃತಿಗಳ ಕನ್ನಡನುವಾದಗಳು ಕನ್ನಡ ಸಾಹಿತ್ಯಕ್ಕೆ ಸೇರ್ಪಡೆಯಾದವು. ಭಾರತದ ಮಣ್ಣಿನಲ್ಲಿ ಅತಿ ಪ್ರಾಚೀನ ಕಾಲದಲ್ಲಿಯೇ ಸಂಸ್ಕೃತ ಭಾಷೆಯಲ್ಲಿ ರಚಿತವಾಗಿರುವ ಶ್ರೇಷ್ಠ ಕೃತಿಗಳಲ್ಲಿ ಹುದುಗಿರುವ ಜ್ಞಾನಸಂಪತ್ತು ಜನಸಾಮಾನ್ಯರೆಲ್ಲರಿಗೂ ಲಭಿಸಲೆಂಬ ಸದುದ್ದೇಶದಿಂದ ಮುಮ್ಮಡಿಯವರು ಸಂಸ್ಕೃತ ವಿದ್ವಾಂಸರಿಗೂ ಕನ್ನಡ ಪಂಡಿತರಿಗೂ ಪ್ರೇರಣೆ ಪೋಷಣೆಗಳನ್ನು ನೀಡಿ ಆಸ್ಥಾನದಲ್ಲಿ ವೇತನಾದಿಗಳನ್ನು ನಿಗದಿಪಡಿಸಿ ನೇಮಿಸಿಕೊಂಡು ಸಂಸ್ತ್ರತ ಭಾಷೆಯಲ್ಲಿದ್ದ ಲೋಕೋತ್ತರವೆನಿಸುವಂತಹ ಕೃತಿಗಳನ್ನು ಕನ್ನಡಕ್ಕೆ ಅನುವಾದ ಮಾಡಿಸಿದರು. ಕನ್ನಡ ಸಾಹಿತ್ಯದ ಅಂದಿನ ದಿನಗಳ ಉದ್ದಾಮ ಪಂಡಿತರೆನಿಸಿದ್ದ ದೇವಚಂದ್ರ, ವೆಂಕಟರಾಮಶಾಸ್ತ್ರಿ, ಬಸವಪ್ಪಶಾಸ್ತ್ರಿ, ಅಳಿಯ ಲಿಂಗರಾಜ, ಶ್ರೀನಿವಾಸಾಚಾರ್ಯ, ಕೆಂಪುನಾರಾಯಣ, ತಿಮ್ಮಯ್ಯಕವಿ, ದೇವಲಾಪುರ ನಂಜುಂಡಕವಿ, ಶಾಂತರಾಜ ಪಂಡಿತ ಮುಮ್ಮಡಿಯವರ ಆಸ್ಥಾನಪಂಡತರಾಗಿದ್ದರು. ಇವರುಗಳ ಪ್ರಾಂತ್ಯದ ನೆರವಿನಿಂದ ಸಂಸ್ಕೃತ ಸಾಹಿತ್ಯ ಸರಸ್ವತಿಯು ಕನ್ನಡಭಾಷೆಯಲ್ಲೂ ಸಹ ಶೋಭಿಸಿದರು.

ದೇವಚಂದ್ರನು ರಚಿಸಿದ ರಾಜಾವಳೀ ಕಥೇಯೂ ಈತನ ಇತರ ಕೃತಿಗಳಾದ. ವಚನಕಾದಂಬರೀ, ಚಂಪೂಕಾವ್ಯವಾದ ರಾಮಕಥಾವತಾರವೂ ಮುಮ್ಮಡಿಯವರ

ಪ್ರೋತ್ಸಾಹದಿಂದ ರಚನೆಗೊಂಡಂತಹವು. ಕೆಂಪುನಾರಾಯಣನು ಕನ್ನಡದಲ್ಲಿ ಮುದ್ರಾಮಂಜೂಷವೆಂಬುದನ್ನು ಗದ್ಯಕಥನರೂಪದಲ್ಲಿ ರಚಿಸಿದನು. ಇದು ಸಂಸ್ಕೃತದಲ್ಲಿ ವಿಶಾಖದತ್ತನು ರಚಿಸಿರುವ 'ಮುದ್ರಾರಾಕ್ಷಸ'ವನ್ನು ಆಧರಿಸಿ ರಚಿತವಾಗಿದೆ. ಮುಮ್ಮಡಿಯವರ ಕಾಲಕ್ಕೆ ಅತ್ಯಂತ ಜನಪ್ರಿಯ ವಿದ್ವಾಂಸರಾಗಿದ್ದವರು ಬಸವಪ್ಪಶಾಸ್ತ್ರಗಳು. ಪ್ರಪ್ರಥಮಬಾರಿಗೆ ಸಂಸ್ಕೃತ ಸಾಹಿತ್ಯದ ಪ್ರಸಿದ್ಧ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿರುವ ಇವರು ಕಾಳಿದಾಸನ ಮೂರು ನಾಟಕಗಳನ್ನೂ ಸಹ ಕನ್ನಡಕ್ಕೆ ಭಾಷಾಂತರಿಸಿ 'ಕನ್ನಡ ನಾಟಕ ಪಿತಾಮಹ'ನೆಂದೂ 'ಅಭಿನವ ಕಾಳಿದಾಸ' ನೆಂದೂ ಸಹ ರಾಜಾಸ್ಥಾನದಲ್ಲಿ ಮುಮ್ಮಡಿಯವರಿಂದ ಬಿರುದುಗಳನ್ನು ಪಡೆದಂಥುಕೊಂಡಿದ್ದರು. ಕಾಳಿದಾಸನ ಮಾಲವಿಕಾಗ್ನಿಮಿತ್ರಮ್, ವಿಕ್ರಮೋರ್ವಶೀಯಮ್, ಅಭಿಜ್ಞಾನಶಕುಂತಲಮ್‌ಗಳನ್ನು ಅನುವಾದಿಸಿರುವುದರ ಜೊತೆಗೆ ಹರ್ಷಚಕ್ರವರ್ತಿಯ ರತ್ನಾವಳೀ, ಕ್ಷೇಮೇಶ್ವರನ ಚಂಡಿಕೌಶಿಕ, ಭವಭೂತಿಯ ಉತ್ತರ ರಾಮಚರಿತೆಗಳು ಕನ್ನಡ ಭಾಷೆಗೆ ಬಸವಪ್ಪಶಾಸ್ತ್ರಿಗಳು ಅನುವಾದಿಸಿರುವರು. ಪ್ರಸಿದ್ಧ ಆಂಗ್ಲಕವಿ ವಿಲಿಯಮ್ ಶೇಕ್ಸ್ಪಿಯರನ ಒಥೆಲೋ (Othello)ದುರಂತ ನಾಟಕವನ್ನು 'ಶೂರಸೇನಚರಿತೆ' ಎಂಬ ಹೆಸರಿನಲ್ಲಿ ಕನ್ನಡಕ್ಕೆ ಅನುವಾದಿಸಿರುವರು. ಸಂಸ್ಕೃತದ ನೈಷಧೀಯಚರಿತೆಯನ್ನು ಆಧರಿಸಿ 'ದಮಯಂತೀಕಥಾ' ಎಂಬ ಕನ್ನಡಚಂಪೂವನ್ನು, ಸಾವಿತ್ರೀಚರಿತ ಎಂಬ (ಭಾಮಿನೀಷಟ್ಪದಿ) ಪದ್ಯಕಾವ್ಯವನ್ನು ಬಸವಪ್ಪಶಾಸ್ತ್ರಿಗಳು ರಚಿಸಿದ್ದಾರೆ.

ಇನ್ನು ಅಳಿಯ ಲಿಂಗರಾಜನು ಮುಮ್ಮಡಿಯವರ ಇಬ್ಬರು ಪುತ್ರಿಯರನ್ನು ವಿವಾಹವಾಗಿದ್ದು ಮಾವನ ಗಾಢವಾದ ಪ್ರಭಾವಕ್ಕೆ ಒಳಗಾಗಿದ್ದ ಸಾಹಿತ್ಯ ಪ್ರೇಮಿ. ಈತನು ರಚಿಸಿರುವ 'ನರಪತಿಚರಿತಮ್ ' ಎಂಬುದು ಅಲಂಕಾರ ಲಕ್ಷಣದ ಗ್ರಂಥ. ಇಲ್ಲಿ ಬರುವ ಲಕ್ಷಣಗಳಿಗೆ ಉದಾರಣೆಗಳೆಲ್ಲವೂ ಮುಮ್ಮಡಿಕೃಷ್ಣರಾಜ ಒಡೆಯರ ಸ್ತುತಿಪರವಾಗಿವೆ. ಲಿಂಗರಾಜರು ಕನ್ನಡದಲ್ಲಿ ಐವತ್ತಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದು ಅವುಗಳಲ್ಲಿ 'ಪ್ರಭಾವತೀ ಪರಿಣಯ' ಎಂಬುದು ಮಹಾಕಾವ್ಯವಾಗಿದೆ. ಇವರು ವಿಶೇಷವಾಗಿ ಸಂಗೀತ ಪ್ರಿಯರೂ, ಯಕ್ಷಗಾನದಲ್ಲಿ ವಿಶೇಷ ಅಭಿರುಚಿಯುಳ್ಳವರೂ ಆಗಿದ್ದರು. ರಾಮಾಯಣ, ಮಹಾಭಾರತ, ಭಾಗವತದಿಂದ ಆಯ್ದಂತಹ ಸುಮಾರು ಮೂವತ್ತಾರು ಯಕ್ಷಗಾನ ಪ್ರಸಂಗಗಳನ್ನು ಲಿಂಗರಾಜರು ರಚಿಸಿದ್ದು ಮನ್ಮಥಮೋಡಿ, ಮದಾಲಸಾಪರಿಣಯ, ನಲಕೂಬರಲವಿಲಾಸ, ಚಂದ್ರಾವಳೀಕಥೆ ಇವುಗಳೂ ಸಹ ಸೇರಿವೆ.

ಸಂಸ್ಕೃತ ಮೂಲಗಳನ್ನು ಆಧರಿಸಿ ಸ್ವತಃ ಮುಮ್ಮಡಿಯವರೇ ರಚಿಸಿದ

ಹಲವಾರು ಕನ್ನಡ ಕೃತಿಗಳ ಬಗ್ಗೆ ಈ ಹಿಂದೆಯೇ ಪ್ರಸ್ತಾಪಿಸಲಾಗಿದ್ದು ಪ್ರಸ್ತಾಪಿಸಲಾಗಿದ್ದು ಪ್ರಾಚೀನಕಾಲದ ದೇವಭಾಷೆ ಸಂಸ್ಕೃತದಲ್ಲಿನ ಜ್ಞಾನಸಂಪತ್ತು ಜನಸಾಮಾನ್ಯರಿಗೆ ದೇಶಭಾಷೆ ಕನ್ನಡದಲ್ಲಿ ಲಭಿಸಲೆಂಬ ಘನವಾದ ಉದ್ದೇಶ ಮುಮ್ಮಡಿಯವರದಾಗಿತ್ತು. ಮುಮ್ಮಡಿಯವರ ಕಾಲವು ಸಾಹಿತ್ಯಸಂಸ್ಕೃತಿಗಳ ದೃಷ್ಟಿಯಿಂದ ಭೋಜರಾಜನ ಆಳ್ವಿಕೆಯ ಕಾಲವನ್ನು ನೆನಪಿಗೆ ತರುವಂತಾಗಿ ಕನ್ನಡದ 'ಭೋಜ'ನೆಂಬ ಹೆಗ್ಗಳಿಕೆಗೆ ಇವರು ಪಾತ್ರರಾಗಿದ್ದರು. ಇಂದಿಗೂ ಮೈಸೂರು ಸಾಂಸ್ಕೃತಿಕ ನಗರವಾಗಿಯೇ ಉಳಿದಿರಲು ಮುಮ್ಮಡಿಯವರು ಪ್ರಧಾನ ಕಾರಣಕರ್ತರಾಗಿದ್ದಾರೆ.

**ಸಂಗೀತಶಾಸ್ತ್ರಕ್ಕೆ ಪ್ರೋತ್ಸಾಹ :**

ಮುಮ್ಮಡಿಯವರು ತಮ್ಮ ಐದನೆಯ ವಯಸ್ಸಿನಿಂದಲೇ ತಂಜಾವೂರಿನಿಂದಾಗಮಿಸಿದ್ದ ವೀಣಾ ವೆಂಕಟಸುಬ್ಬಯ್ಯನವರಿಂದ ಶಾಸ್ತ್ರೀಯ ಸಂಗೀತವನ್ನು ಕಲಿತು ಉತ್ತಮ ಮಟ್ಟದ ವೀಣಾವಾದಕರಾಗಿದ್ದವರು. ಇವರಲ್ಲಿದ್ದ ಸಂಗೀತಪ್ರೇಮ ನಾಡಿನ ಮೂಲೆ ಮೂಲೆಗಳಿಂದ ಪ್ರಸಿದ್ಧ ಸಂಗೀತವಿದ್ವಾಂಸರನ್ನು ಮೈಸೂರಿನತ್ತ ಆಕರ್ಷಿಸಿತ್ತು. ಇವರೆಲ್ಲರಿಗೂ ರಾಜಾಶ್ರಯ ನೀಡಿ ಅವರಲ್ಲಿದ್ದ ಪ್ರತಿಭೆಗೆ ವಿಶೇಷ ಪ್ರೋತ್ಸಾಹ ನೀಡಿ ಸಂಗೀತಶಾಸ್ತ್ರ ಸಂಬಂಧಿಸಿದಂತೆ ವಿನೂತನ ರಚನೆಗಳಿಗೂ, ಗ್ರಂಥಗಳ ಪ್ರಕಟಣೆಗೂ ಒತ್ತು ನೀಡಿ ಸಂಗೀತಕಲೆಯನ್ನು ಅಭಿವೃದ್ಧಿ ಪಡಿಸಿದವರು ಮುಮ್ಮಡಿಯವರು. ಸ್ವತಃ ವೀಣಾವಾದನ ಚತುರರಾಗಿದ್ದ ಮುಮ್ಮಡಿಯವರ 'ಸ್ವರಚೂಡಾಮಣಿ' ಎಂಬ ಸಂಗೀತಶಾಸ್ತ್ರಕ್ಕೆ ಸಂಬಂಧಿಸಿದ ಸಚಿತ್ರ ಕೃತಿಯಲ್ಲಿ ರಾಗಗಳಿಗೆ ರೂಪಕೃತಿಗಳನ್ನು ನೀಡಿ ವರ್ಣಚಿತ್ರಗಳನ್ನು ಬರೆಸಿದ್ದಾರೆ.

ಆಸ್ಥಾನ ಸಂಗೀತ ವಿದ್ವಾಂಸರುಗಳಾದ ವೀಣೆ ವೆಂಕಟಸುಬ್ಬಯ್ಯ, ವೀಣೆಅಣ್ಣಯ್ಯ, ಲಾಲಗುಡಿ ರಾಮಯ್ಯರ್, ಸಂಗೀತ ಕಛೇರಿಗಳು ಮೈಸೂರಿನಲ್ಲಿ ವಿಶೇಷವಾದ ವಾತಾವರಣವನ್ನೇ ಅಂದಿನ ದಿನಗಳಲ್ಲಿ ಸೃಷ್ಟಿಸಿದ್ದವು. ಇವರುಗಳ ವ್ಯಕ್ತಿಗತ ಭಾವಚಿತ್ರಗಳು (ವರ್ಣಚಿತ್ರಗಳು) ಇಂದಿಗೂ ಸಹ ಅರಮನೆಯಲ್ಲಿ ಸಂರಕ್ಷಿತ ವಾಗಿದ್ದು, ಅಂದಿನ ವೈಭವವನ್ನು ಸಾರಿ ಹೇಳುತ್ತಿವೆ.

**ಕರಕುಶಲ ವಿದ್ಯೆಗಳ ಅಭಿವೃದ್ಧಿ :**

ಮುಮ್ಮಡಿಯವರು ಗ್ರಾಮಾಂತರ ಪ್ರದೇಶಗಳಲ್ಲಿನ ಕರಕುಶಲ ವಿದ್ಯೆಯಲ್ಲಿ ಪಳಗಿದವರನ್ನು ಗುರುತಿಸಿ ಪ್ರೋತ್ಸಾಹಿಸಿ ಅವರುಗಳಿಂದ ಕಲಾತ್ಮಕ ವಸ್ತುಗಳ ನಿರ್ಮಾಣಕ್ಕೆ ಬೇಕಾದ ಸಾಮಗ್ರಿಗಳನ್ನು, ಸರಕಾರದ ವತಿಯಿಂದ ಒದಗಿಸಿ ಗುಡಿ

ಕೈಗಾರಿಕೆಗಳಿಗೆ ಮೈಸೂರು ರಾಜ್ಯದಲ್ಲಿ ಭದ್ರ ಬುನಾದಿ ಹಾಕಿಕೊಟ್ಟರು. ಗಂಧ, ಬೀಟೆ ಮರಗಳಿಂದ ವಿನ್ಯಾಸಗೊಳಿಸಬಹುದಾದ ಸುಂದರ ಕಲಾಕೃತಿಗಳು, ವಿವಿಧ ಬಣ್ಣದ ಮರದ ಕ್ರೀಡಾ ಸಾಮಗ್ರಿಗಳು, ಕೇರಂ, ಚದುರಂಗವೇ ಮೊದಲಾದ ಆಟದ ಪಲಗೆಗಳು, ಪಗಡೆಯ ದಳಗಳು, ಆಟದ ಕಾಯಿಗಳು ಇವುಗಳನ್ನು ಸಿದ್ಧಪಡಿಸುವ ಗುಡಿ ಕೈಗಾರಿಕೆಗಳು, ಹಾಗೂ ಸಿದ್ಧಗೊಂಡ ವಸ್ತುಗಳು ವ್ಯಾಪಾರ ವಹಿವಾಟುಗಳಿಗೆ ಮೈಸೂರು ಕೇಂದ್ರವಾಗಿ ಪರಿಣಮಿಸಿ ಮುಂದೆ ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲಕ್ಕೆ ವಿಶೇಷವಾಗಿ ಮತ್ತೂ ಅಭಿವೃದ್ಧಿಗೊಂಡವು. ತತ್ರಾಪಿ ಶ್ರೀಗಂಧದ ಕಲಾತ್ಮಕ ವಸ್ತುಗಳಿಗೆ, ಪ್ರಸಿದ್ಧವಾದ ರೇಶಿಮೇ (ಮೈಸೂರು ಸಿಲ್ಕ್) ಉದ್ಯಮಕ್ಕೆ ಮೈಸೂರು ಇಂದಿಗೂ ಸಹ ಜಗತ್ಪ್ರಸಿದ್ಧವಾಗಿಯೇ ಉಳಿದುಕೊಂಡು ಬಂದಿದೆ. 'ಗಂಜೀಫಾ' ಆಟವು ಮೊಗಲರ ಕಾಲದಲ್ಲಿ ಬಹುಜನಪ್ರಿಯವಾಗಿದ್ದ ಕಾರ್ಡುಗಳ ಆಟ. ಇದನ್ನು ಅಭಿವೃದ್ಧಿಪಡಿಸಿ ನಾನಾಬಗೆಯ ಶ್ರೀಮಂತರಿಗೆ ಮತ್ತು ಜನಸಾಮಾನ್ಯರಿಗಾಗಿಯೇ ವಿವಿಧ ನಮೂನೆಯ ಗಂಜೀಫಾ ಕಾರ್ಡುಗಳನ್ನು ಚಿತ್ರಕಲಾವಿದರ ನೆರವಿನಿಂದ ಸಿದ್ಧಪಡಿಸಿ ಜನಪ್ರಿಯ ಆಟವನ್ನಾಗಿ ಮಾಡಿದ ಕೀರ್ತಿ ಮುಮ್ಮಡಿಯವರಿಗೆ ಸಲ್ಲುತ್ತದೆ.

**ಚಿತ್ರಕಲೆಯ ಅಭಿವೃದ್ಧಿ :** ಸಾಹಿತ್ಯ ಸಂಗೀತಗಳಂತೆಯೇ ಚಿತ್ರಕಲೆಗೂ ಕೂಡ ವಿಶೇಷವಾದ ಪ್ರೋತ್ಸಾಹವನ್ನು ಮುಮ್ಮಡಿಯವರು ನೀಡಿರುವುದಕ್ಕೆ ಇಂದಿಗೂ ಸಹ ಮೈಸೂರಿಗೆ ಆಗಮಿಸುವ ಪ್ರವಾಸಿಗರನ್ನು ಆಕರ್ಷಿಸುತ್ತಿರುವ ಜಗನ್ಮೋಹನ ಪ್ಯಾಲೆಸ್, ಬೆಂಗಳೂರಿನಲ್ಲಿ ಮುಮ್ಮಡಿಯವರಿಂದಲೇ ಸ್ಥಾಪನೆಗೊಂಡು ಇಂದಿಗೂ ಗಮನ ಸೆಳೆಯುತ್ತಿರುವ ವೆಂಕಟಪ್ಪ ಆರ್ಟ್‌ಗ್ಯಾಲರಿಗಳೇ ಸಾಕ್ಷಿಗಳಾಗಿವೆ. ಇತಿಹಾಸ ಸಂಶೋಧಕರಿಗೂ ಸಹ ಇವುಗಳಿಂದ ಅಗತ್ಯ ಮಾಹಿತಿ ಲಭಿಸುತ್ತಿದೆ.

ಮುಮ್ಮಡಿಯವರು ತಾವೇ ರಚಿಸಿದ ಕೃತಿಗಳಿಗೂ ತಮ್ಮ ಅವಧಿಯಲ್ಲಿ ರಚನೆಯಾದ ಆಸ್ಥಾನ ವಿದ್ವಾಂಸರುಗಳ, ಕವಿಗಳ ಕೃತಿಗಳಿಗೂ ಸಹ ಬರವಣಿಗೆಗಳಿಗೆ ಅನ್ವಯಿಸುವಂತೆ ರೇಖಾಚಿತ್ರಗಳನ್ನೂ ವರ್ಣಚಿತ್ರಗಳನ್ನೂ ಬರೆಸಿದರು. ಆಸ್ಥಾನದಲ್ಲಿ ಅಂದಿನ ಪ್ರಸಿದ್ಧ ಸೂಕ್ಷ್ಮಚಿತ್ರಕಾರರುಗಳಿಗೆ ಆಶ್ರಯವನ್ನು ನೀಡಿ ಪ್ರಾಚೀನ ಸಾಂಪ್ರದಾಯಿಕ ಶೈಲಿ ಹಾಗೂ ಮೊಗಲರ ಕಾಲದಲ್ಲಿ ಪ್ರಚಲಿತವಾಗಿದ್ದ ಚಿತ್ರಶೈಲಿಗಳೆರಡೂ ಬೆರೆತ ವಿನೂತನ ಮೈಸೂರು ಶೈಲಿಯ ವರ್ಣಚಿತ್ರಗಳ ಸೃಷ್ಟಿಗೆ ಕಾರಣರಾದರು. 1861 ರಲ್ಲಿ ಮೈಸೂರಿನಲ್ಲಿ ಸ್ಥಾಪನೆಯಾದ 'ಜಗನ್ಮೋಹನ ಚಿತ್ರಕಲಾ ಅರಮನೆ' ಯಲ್ಲಿ ಮೈಸೂರು ರಾಜಮನೆತನದ ಸಂತಾನವೃಕ್ಷ, ರಾಜಕುಟುಂಬಸ್ಥರ, ಬಂಧುಗಳ ವರ್ಣಚಿತ್ರಗಳನ್ನು ಸಂರಕ್ಷಿಸಿ ಇಡಲಾಗಿದೆ.

ಮುಮ್ಮಡಿಯವರು ಆಸ್ಥಾನದ ಚಿತ್ರಕಾರರಿಂದ ಬರೆಸಿದ ವ್ಯಕ್ತಿಚಿತ್ರಗಳೇ ಒಂದು ಸಾವಿರಕ್ಕೂ ಮೀರಿದ ಸಂಖ್ಯೆಯಲ್ಲಿದ್ದು ರಾಜಕೀಯಕ್ಕೆ ಸಂಬಂಧಪಟ್ಟ ಉನ್ನತ ಅಧಿಕಾರಿಗಳು, ಸಂಗೀತಗಾರರು, ಪಂಡಿತರುಗಳು, ದರಬಾರು ಭಕ್ಷಿಗಳು, ಚಿತ್ರಕಾರರು, ಜಟ್ಟಿಗಳೂ ಸಹ ಭಾವಚಿತ್ರಗಳ ಸಂಗ್ರಹದಲ್ಲಿದ್ದರು. ಮುಮ್ಮಡಿಯವರಿಗೆ ಬಾಲ್ಯದಲ್ಲಿಯೇ ಸಂಗೀತಶಿಕ್ಷಣವನ್ನು ಆರಂಭಿಸಿದ ವೀಣೆ ವೆಂಕಟಸುಬ್ಬಯ್ಯನವರ ವರ್ಣಚಿತ್ರ, ಇತರ ಸಂಗೀತವಿದ್ವಾಂಸರಾದ ಲಾಲಗುಡಿ ರಾಮಯ್ಯರ್, ಸಂಗೀತ ಜೀಯರ್, ವೀಣೆ ಅಣ್ಣಯ್ಯ, ವೀಣೆ ಅನಂತಸುಬ್ಬಯ್ಯ, ವೀಣೆ ಅಪ್ಪಯ್ಯ, ಸಂಗೀತಗಾರ ಮುಗಾಪತಯ್ಯ, ಘಟದ ರಂಗರಾಯ ಮೊದಲಾದವರ ವರ್ಣಚಿತ್ರಗಳಿವೆ. ಚಿತ್ರಗಾರ ಮೇಸ್ತ್ರಿ ಲಕ್ಷ್ಮಯ್ಯ ಹಾಗೂ ಇತರ ಪ್ರಸಿದ್ಧ ಚಿತ್ರಕಾರರುಗಳಾದ ನಾರಣಪ್ಪ, ವೆಂಕಟಪ್ಪ ಚಿನ್ನಕೃಷ್ಣ ಮುಂತಾದವರ ಚಿತ್ರಗಳೂ, ಹರಿಕಥಾಪರಿಣತರುಗಳಾದ ಸುರಪುರದ ಶೇಷದಾಸರು, ಭೀಮದಾಸರು, ಲಕ್ಷ್ಮಿಪಂಡಿತರು ಹಾಗೂ ಅವರ ಮಗ ಸೂರಿಪಂಡಿತರು, ಜಟ್ಟಿಗಳಾದ ಉಸ್ತಾದ್ ವೆಂಕಾಕಟ್ಟಿ, ತುಕಾಡೀದರ ರಮಾಜಟ್ಟಿ, ಅಪ್ಪೂ ಜಟ್ಟ, ಖಡ್ಗವೀರ ಲಕ್ಷ್ಮಣನಾಯಕ, ಸೈನ್ಯದ ತುಕಡಿಗಳ ಮುಖ್ಯಸ್ಥರಾದ ಜನರಲ್ ಶಂಕರದಾಸ್, ದಫೇದಾರ್ ವೆಂಕಟರಮಣಯ್ಯ, ಜಮಾದಾರ್‌ರಾದ ಮುದ್ದುಕೃಷ್ಣಸಿಂಗ್ ಹೀಗೆ ಸಾವಿರಕ್ಕೂ ಮೀರಿದ ವ್ಯಕ್ತಿಚಿತ್ರಗಳು ಇಂದಿಗೂ ಸಹ ಜಗನ್ಮೋಹನ ಪ್ಯಾಲೇಸಿನಲ್ಲಿ ಸಂರಕ್ಷಿಸಲ್ಪಡುತ್ತಿವೆ.

ಇಲ್ಲಿ ಮುಕ್ತಪ್ರವೇಶವಿದೆ. 1865 ರಲ್ಲಿ ಮುಮ್ಮಡಿಯವರಿಂದ ಬೆಂಗಳೂರಿನಲ್ಲಿ ಸ್ಥಾಪನೆಗೊಂಡ 'ವೆಂಕಟಪ್ಪ ಆರ್ಟ್ ಗ್ಯಾಲರಿ'ಯು ಇತಿಹಾಸವನ್ನು ಅಧ್ಯಯನ ಮಾಡುವವರಿಗೆ ಇಂದಿಗೂ ಸಹ ತನ್ನತ್ತ ಸೆಳೆಯುತ್ತಿರುವ ಪ್ರಸಿದ್ಧ ಚಿತ್ರಕಲಾ ಸಂಗ್ರಹಾಲಯವೆನಿಸಿದೆ. ಸುಮಾರು ಆರು ನೂರಕ್ಕೂ ಮೀರಿದ ಚಿತ್ರಕಲಾ ಕೃತಿಗಳು ಇಲ್ಲಿವೆ. ಇಲ್ಲಿಯೂ ಸಹ ಆಸಕ್ತರಿಗೆ ಮುಕ್ತ ಪ್ರವೇಶವಿದೆ.

ರಾಜಧಾನಿಯ ಸ್ಥಳಾಂತರ : ಆಡಳಿತಾತ್ಮಕವಾಗಿ ಮುಮ್ಮಡಿಯವರು ಕೈಗೊಂಡು ಒಂದು ಮಹತ್ತ್ವದ ನಿರ್ಧಾರವೆಂದರೆ ಮೈಸೂರು ಸಂಸ್ಥಾನದ ರಾಜಧಾನಿಯುನ್ನು ಶ್ರೀರಂಗಪಟ್ಟಣದಿಂದ ಮೈಸೂರು ನಗರವನ್ನು ಬದಲಾಯಿಸಿದುದು. ಇವರ ಆಳ್ವಿಕೆಗೂ ಮೊದಲು ಮೈಸೂರು ಸಂಸ್ಥಾನವನ್ನು ಆಕ್ರಮಿಸಿಕೊಂಡಿದ್ದ ಹೈದರಾಲಿಗೂ ಆತನ ಪುತ್ರ ಟೀಪುಸುಲ್ತಾನನಿಗೂ ಶ್ರೀರಂಗಪಟ್ಟಣವೇ ರಾಜಧಾನಿಯಾಗಿದ್ದು, ಅಂದಿನ ದಿನಗಳಲ್ಲಿ ಮೈಸೂರು ಸಂಪೂರ್ಣವಾಗಿ ಉಪೇಕ್ಷೆಗೆ ಗುರಿಯಾಗಿದ್ದ ಹಾಳೂರಾಗಿ ಉಳಿದು ಹೋಗಿತ್ತು. ಮುಮ್ಮಡಿಯವರು ತಮ್ಮ ಆಳ್ವಿಕೆಯ ಅವಧಿಯಲ್ಲಿ ಮೈಸೂರು ರಾಜ್ಯಕ್ಕೆ

ರಾಜಧಾನಿಯನ್ನು ಪ್ರಮುಖ ಆಡಳಿತ ಕಛೇರಿಗಳನ್ನು ವರ್ಗಾಯಿಸಿ ಮೈಸೂರಿನ ಅಭಿವೃದ್ಧಿಗೆ, ಸಾಂಸ್ಕೃತಿಕ ನಗರಿಯ ಮೈಸೂರು ಬದಲಾಗಲು ಅಡಿಪಾಯ ಹಾಕಿದರು. ಮುಂದೆ ನಾಲ್ವಡಿ ಕೃಷ್ಣರಾಜ ಒಡೆಯರ್ ರವರ ಕಾಲಕ್ಕೆ ಮೈಸೂರು ಮಾದರಿ ಮೈಸೂರಾಗಿ ನಾಲ್ವಡಿ ಕೃಷ್ಣರಾಜ ಒಡೆಯರ್ ರವರು ರಾಜರ್ಷಿಯೆಂಬ ಜಗತ್ಪ್ರಸಿದ್ಧಿಯನ್ನು ಪಡೆಯಲು ಅನುವು ದೊರೆತಂತಾಯಿತು.

ಜನಸಾಮಾನ್ಯರಿಗೆ ವಿದ್ಯಾಭ್ಯಾಸ: ಕನ್ನಡ, ಸಂಸ್ಕೃತ ಭಾಷೆಗಳು ಮುಮ್ಮಡಿಯವರಿಗೆ ಪ್ರಿಯವಾಗಿದ್ದರೂ ಇಂಗ್ಲಿಷ್ ಭಾಷೆಯ ಮಹತ್ತ್ವವನ್ನು ಅರಿತಿದ್ದ ಅವರು ಪ್ರಪ್ರಥಮವಾಗಿ 'ಮಹಾರಾಜಾ ಇಂಗ್ಲಿಷ್ ಸ್ಕೂಲ್' ಎಂಬ ಆಂಗ್ಲಶಾಲೆಯೊಂದನ್ನು 1833ರಲ್ಲಿ ಮೈಸೂರು ನಗರದಲ್ಲಿ ಪ್ರಾರಂಭಿಸಿದರು. ಪ್ರಥಮ ಹಂತದಲ್ಲಿ ಇದು 'ರಾಜಾ ಫ್ರೀ ಸ್ಕೂಲ್' ಎಂಬ ಪಾಠಮಿಕ ಶಾಲೆ. ಇದೇ ಕಿರುತೊರೆಯು ಕಾಲಕ್ರಮೇಣ ಮಹಾರಾಜಾ ಇಂಗ್ಲಿಷ್ ಸ್ಕೂಲ್ ಆಗಿ ಬದಲಾವಣೆ ಹೊಂದಿ, ಇಂಟರ್ ಮೀಡಿಯಟ್ ಕಾಲೇಜ್ ಆಫ್ ಆರ್ಟ್ಸ್ ಆಗಿ ಮುಮ್ಮಡಿಯವರ ಮೊಮ್ಮಗ ಚಾಮರಾಜ ಒಡೆಯರ್ ಸುಪುತ್ರರಾದ ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲಕ್ಕೆ ಮೈಸೂರು ರಾಜ್ಯದಲ್ಲಿ ಸ್ಥಾಪನೆಯಾಗಿದ್ದ ಬೆರಳೆಣಿಕೆಯಷ್ಟು ಕಾಲೇಜುಗಳು ಮದರಾಸು ವಿಶ್ವವಿದ್ಯಾನಿಲಯದ ಹಿಡಿತದಲ್ಲಿದ್ದವು. ಶಾರದಾವಿಲಾಸ ಆಂಗ್ಲ ಶಾಲೆ, ಸಂಸ್ಕೃತ ಪಾಠಶಾಲೆಯನ್ನು ಮೈಸೂರಿನ ಲ್ಯಾನ್ಸ್ ಡೌನ್ ಕಟ್ಟಡದಲ್ಲಿ 1861ರಲ್ಲಿ ಮುಮ್ಮಡಿಯವರು ಪ್ರಾರಂಭಿಸಿ, ಭಕ್ಷಿ ನರಸಪ್ಪ ಎಂಬುವವರನ್ನು ಮೇಲ್ವಿಚಾರಕರನ್ನಾಗಿ ಮಾಡಿ ಸರ್ಕಾರದ ವತಿಯಿಂದ ನಡೆಸಲಾರಂಭಿಸಿದರು.

ಮುಂದೆ ಇದೇ ಶಾಲೆಯು ಮೈಸೂರಿನ ಕೃಷ್ಣಮೂರ್ತಿಪುರಂ ಬಡಾವಣೆಗೆ ಸ್ಥಳಾಂತರಗೊಂಡು ಶಾರದಾವಿಲಾಸ ಕಾಲೇಜು ಆಗಿ ಅಭಿವೃದ್ಧಿಗೊಂಡು, ಇಂದಿಗೂ ಸಹ ಕಾನೂನು ಹಾಗೂ ವಿಜ್ಞಾನ, ಕಲಾನಿಕಾಯಗಳೊಡನೆ ಪ್ರಸಿದ್ಧ ವಿದ್ಯಾಸಂಸ್ಥೆಯಾಗಿದೆ. ಹಾಗೆಯೇ ಶ್ರೀಮನ್ಮಹಾರಾಜಾ ಸಂಸ್ಕೃತ ಪಾಠಶಾಲೆಯೂ ಸಹ ಮುಮ್ಮಡಿಯವರಿಂದ ಪ್ರಾರಂಭಗೊಂಡು, ಅನಂತರ ಅವರ ಉತ್ತರಾಧಿಕಾರಿಯಾಗಿ ಮೈಸೂರು ಸಿಂಹಾಸನವನ್ನೇರಿದ ಹತ್ತನೆಯ ಚಾಮರಾಜ ಒಡೆಯರ್ ರವರಿಂದ ಅಭಿವೃದ್ಧಿಗೊಂಡಿತು.

**ಮುದ್ರಣಯಂತ್ರದ ಸ್ಥಾಪನೆ :**

ವಿದ್ಯಾಭಿಮಾನಿಯೂ, ಜ್ಞಾನಪ್ರಸಾರಾಸಕ್ತರೂ ಆಗಿದ್ದ ಮುಮ್ಮಡಿಯವರು ಮುದ್ರಣ ಯಂತ್ರವೊಂದನ್ನು ಪ್ರಪ್ರಥಮವಾಗಿ ತಮ್ಮ ಅರಮನೆಯ

ಆವರಣದಲ್ಲಿಯೇ ಸ್ಥಾಪಿಸಿ ಹಲವಾರು ಗ್ರಂಥಗಳನ್ನು ಮುದ್ರಿಸಿ ಪ್ರಕಟಿಸಿದರು. ಅಲ್ಲದೆ. ಹಲವಾರು ಧಾರ್ಮಿಕ ಗ್ರಂಥಗಳನ್ನು ಮುದ್ರಿಸಿ ಪ್ರಕಟಿಸಿ ಜಿಜ್ಞಾಸುಗಳಿಗೆ ದಾನವಾಗಿ ನೀಡಿದರು. ವಿದೇಶೀಯರಿಗಿಂತಲೂ ಮೊದಲೇ ಬಣ್ಣದ ಮುದ್ರಣವನ್ನು ಇಲ್ಲಿ ಪ್ರಾರಂಭಿಸಿದುದು ಕರ್ನಾಟಕಕ್ಕೆ ಹೆಮ್ಮೆಯ ವಿಚಾರ. ಶ್ರೀಮನ್ಮಹಾರಾಜರವರ ವಂಶಾವಳಿಯ ಎರಡನೆಯ ಭಾಗದಲ್ಲಿ ಒಂದೆಡೆ "ಸನ್ 1841–42ನೇ ಇಸವಿಯಲ್ಲಿ ಸರ್ಕಾರಿ ಕೆಲಸಗಳಿಗೆ ಸೌಕರ್ಯವುಂಟಾಗುವಂತೆ ಬೆಂಗಳೂರಿನಲ್ಲಿ ಒಂದು ಅಚ್ಚು ಕಾರ್ಖಾನೆಯು ಸ್ಥಾಪಿತವಾಯಿತು."

ಮತ್ತೊಂದೆಡೆ ಮಹಾರಾಜರು ಬರೆದಿರುವ ಗ್ರಂಥಗಳನ್ನು ಭಗವದ್ಗೀತೆ ಮೊದಲಾದ ಅನೇಕ ಪ್ರಾಚೀನ ಗ್ರಂಥಗಳನ್ನೂ ಆಯಾ ದೇವತಾಚಿತ್ರಗಳಿಂದ ಒಡಗೂಡಿರುವಂತೆ 'ಅಂಬಾವಿಲಾಸ ಮುದ್ರಾಕ್ಷರಶಾಲಾ ಶಿಲಾಯಂತ್ರದಲ್ಲಿ ಅಚ್ಚು ಹಾಕಿಸಿ ವಿದ್ವಾಂಸರು ದೇಶಾಂತರಗಳಲ್ಲಿರುವ ವಿದ್ವಾಂಸರು ಅಧಿಕಾರಸ್ಥರು ಮುಂತಾದವರನೇಕರಿಗೆ ಉಚಿತವಾಗಿ ಕೊಟ್ಟು ಸಂತೋಷಪಡಿಸಿದರು" ಎಂಬುದಾಗಿದೆ. 'ನವರತ್ನಶಾಸನ' ದಲ್ಲಿನ ಸಾರಸ್ವತರತ್ನದಲ್ಲಿ ಈ ಬಗ್ಗೆ ಸ್ಪಷ್ಟಪಡಿಸಿರುವುದನ್ನು ಗಮನಿಸಬಹುದಾಗಿದೆ. ಮುಮ್ಮಡಿಯವರು ರಚಿಸುದ ದೇವತಾಸ್ತೋತ್ರಗಳು, ಚಾಮುಂಡಿಲಘುನಿಘಂಟು, ಗ್ರಹಣದರ್ಪಣ, ಸಂಖ್ಯಾರತ್ನಕೋಶ ಹಾಗೂ ಇದೇ ಕೃತಿಯ ಮರಾಠಿ ಅವತರಣಿಕೆ, ಚತುರಂಗಸಾರಸರ್ವಸ್ವ, ರಾಮಕಥಾಪುಷ್ಪಮಂಜರಿ, ಸೌಗಂಧಿಕಾಪರಿಣಯ (ಗದ್ಯ) ಇವುಗಳೆಲ್ಲವೂ ಅಲ್ಲಿ ನಡುವೆ ರೇಖಾಚಿತ್ರಗಳ ಸಹಿತ ಅಲ್ಲಲ್ಲಿ ವರ್ಣಚಿತ್ರಗಳ ಸಹಿತ, ಅಂಬಾವಿಲಾಸ ಅರಮನೆಯ ಆವರಣದಲ್ಲಿ ಸ್ಥಾಪಿತವಾಗಿದ್ದ ಅಚ್ಚುಕೂಟದಲ್ಲಿ ಮುದ್ರಣಗೊಂಡಿರುವುದು ಹಲವು ದಾಖಲೆಗಳ ಆಧಾರದಿಂದ ದೃಢಪಟ್ಟಿದೆ.

**ಯಕ್ಷಗಾನ ಕಲಾವಿದರಿಗೆ ಪ್ರೋತ್ಸಾಹ :** ಸಂಗೀತರೂಪಕವೆನಿಸಬಹುದಾದ ಅಥವಾ ನೃತ್ಯ ನಾಟಕವೆನ್ನ ಬಹುದಾದ ಯಕ್ಷಗಾನ ಕಲೆಯು ವಿಶೇಷವಾಗಿ ದಕ್ಷಿಣಕನ್ನಡ ಪ್ರಾಂತ್ಯದಲ್ಲಿ ಹುಟ್ಟಿಕೊಂಡು ಇಂದಿನ ದಿನಗಳಲ್ಲಿ ಇಡೀ ಕರ್ನಾಟಕದಲ್ಲಿ ಜನಪ್ರಿಯವಾಗಿದೆ. ಮುಮ್ಮಡಿಯವರ ಅಳಿಯಂದಿರಾದ ಲಿಂಗರಾಜರಿಗೂ ಸಹ ಇದು ಮೆಚ್ಚಿನ ಕಲೆಯಾಗಿದ್ದು ಅವರೂ ಸಹ ಮೂವತ್ತಾರು ಯಕ್ಷಗಾನ ಪ್ರಸಂಗಗಳನ್ನು ಬರೆದಿರುವ ಬಗ್ಗೆ ಈ ಹಿಂದೆಯೇ ತಿಳಿಸಲಾಗಿದೆ. ಮುಮ್ಮಡಿಯವರು ಈ ಕಲೆಯನ್ನು ಪ್ರೋತ್ಸಾಹಿಸಿ ಅರಮನೆಯಲ್ಲಿ ಯಕ್ಷಗಾನ ಪ್ರಸಂಗಗಳನ್ನು ಏರ್ಪಡಿಸುತ್ತಿದ್ದರಲ್ಲದೆ ಪಾರ್ತಿಸುಬ್ಬನೆಂಬ ಯಕ್ಷಗಾನ ಕಲಾವಿದರನ್ನು ಆಹ್ವಾನಿಸಿ

ಆಸ್ಥಾನದಲ್ಲಿ ನೇಮಿಸಿಕೊಂಡಿದ್ದರು. ಯಕ್ಷಗಾನ ಕಲಾವಿದರಿಗಾಗಿಯೇ ಈತನ ಹೆಸರಿನಲ್ಲಿ ಪುರಸ್ಕಾರವನ್ನು ಸರ್ಕಾರದ ವತಿಯಿಂದ ಮಂಜೂರು ಮಾಡಿದ್ದು ಇಂದಿಗೂ ಸಹ ಇದು ಮುಂದುವರೆದುಕೊಂಡು ಬಂದಿದೆ.

ಸಾಹಿತ್ಯಕ್ಷೇತ್ರದಲ್ಲಿ ಹಾಗೂ ಸಾಂಸ್ಕೃತಿಕವಲಯಕ್ಕೆ ಸಂಬಂಧಿಸಿದಂತೆ ಮುಮ್ಮಡಿಯವರ ಸಾಧನೆಗಳ ಬಗ್ಗೆ ಈಗಾಗಲೇ ಹಲವಾರು ಗ್ರಂಥಗಳು ರಚನೆಗೊಂಡಿರುವುದು ಮಹತ್ವದ ಸಂಗತಿಯಾಗಿದೆ.

ಮುಮ್ಮಡಿ ಕೃಷ್ಣರಾಜ ಒಡೆಯರವರು ಸನ್ 1799ನೇ ಜೂನ್ ಮಾಹೆ ತಾರೀಖು 30 ರಲ್ಲಿ ಪಟ್ಟಾಭಿಷಕ್ತರಾದರು. ಅನಂತರ ಅಭಿವೃದ್ಧಿ ಪರ್ವ ಆರಂಭವಾಯಿತು. ಇದೇ ಸಮಯದಲ್ಲಿ ದಿವಾನ್ ಪೂರ್ಣಯ್ಯನವರ ಸಲಹೆಯಂತೆ ಬ್ರಿಟಿಷ್ ದಳಪತಿಯಾದ ಜನರಲ್ ಹ್ಯಾರೀಸ್‌ರವರು ಹಳೇ ಮೈಸೂರು ಅರಮನೆಯನ್ನು ಜೀರ್ಣೋದ್ಧಾರ ಮಾಡಿಸಿದರು. ಹಳೇ ಅರಮನೆಯು 245 ಅಡಿ ಉದ್ದ, 156 ಅಡಿ ಅಗಲ ಹಾಗೂ 145 ಅಡಿ ಎತ್ತರವಿತ್ತು. ಅರಮನೆಯ ಒಟ್ಟು ವಿಸ್ತೀರ್ಣ 85 ಎಕರೆ, 30 ಗಂಟೆ ಕೋಟೆಗೋಡೆ ಪೂರ್ವ ಪಶ್ಚಿಮ ಮತ್ತು ಉತ್ತರ 1350 ಅಡಿಗಳು, ದಕ್ಷಿಣದ ಗೋಡೆ 1400 ಅಡಿಗಳು. ಅರಮನೆಯನ್ನು ಜೀರ್ಣೋದ್ಧಾರ ಮಾಡಿದಾಗ ಆದ ಖರ್ಚಿನ ವಿವರವು ಹೀಗಿದೆ:

1799–1800 – 29,503

1800–1801 – 33,000

1801–1802 – 45,572

59,522

1802–1803 – 43,160

1803–1804 – 39,530

ಒಟ್ಟು ಖರ್ಚು – 2,47,287 ಕಂಠೀರಾಯಿ ಪಗೋಡ

ಅಂದರೆ 7,41,816 ರೂಪಾಯಿಗಳು.

ಮುಮ್ಮಡಿ ಶ್ರೀ ಕೃಷ್ಣರಾಜರು ಸ್ವತಂತ್ರವಾಗಿ ಆಳ್ವಿಕೆ ಮಾಡಿದ್ದು 1812 ರಿಂದ 1831ರ ವರೆಗೆ, 1831 ರಿಂದ 1881 ರವರೆಗೆ ರಾಜ್ಯವು ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿತು. ಇವರ ಆಳ್ವಿಕೆಯ ಕಾಲದಲ್ಲಿ ನೇಮಕವಾಗಿದ್ದ ಅಷ್ಟ ಪದಾಧಿಕಾರಿಗಳು ಹಾಗೂ ಹದಿನಾರು ಉಪ ಪದಾಧಿಕಾರಿಗಳ ವಿವರವು ವಂಶಾವಳಿಯಲ್ಲಿ (ಚಾಮರಾಜೇಂದ್ರ ಕಾಲದ ಹಸ್ತಪ್ರತಿಯಲ್ಲಿ) ಹೀಗೆ ನಿರೂಪಿತವಾಗಿದೆ:

ಅಷ್ಟಪದಾಧಿಕಾರಿಗಳು : 1. ಯುವರಾಜ, 2. ಸೇನಾಪತಿ, 3. ಮಂತ್ರಿ, 4. ಸರ್ವಾಧಿಕಾರಿ, 5. ಅಂತಃಪುರಾಧಿಕಾರಿ, 6. ಧರ್ಮ ಸಚಿವ, ಆಪ್ತ ಸಚಿವ, ದೈವಜ್ಞ, ರುತ್ವಿಕ್ಕು, 7. ಅಶ್ವರಥಾಧಿಕಾರಿ, 8. ಪದಗಜಾಧಿಕಾರಿ ಶೇಷಾಧಿಕಾರಿ, 9. ಪದಾತಿ ಪದನಳಿಕ ಅಧಿಕಾರಿ, 10. ಕೋಶಾಧಿಕಾರಿ, ಪದಬಂಡಾರಾಧಿಕಾರಿ ಸಹ, 11. ಪುರಾಧಿಕಾರಿ, 12. ಕಾರಾಧಿಕಾರಿ, 13. ರಾಜಾಸ್ಥಾನ ದೌವ್ವಾರಿಕ, 14. ಅಂತಃಪುರ ಮಮುಖ ದೌವ್ವಾಧಿಕಾರಿ, 15. ಧರ್ಮಾಧಿಕಾರಿ, 16. ನ್ಯಾಯಾಧಿಕಾರಿ, 17. ಶಿಲ್ಪಶಲಾಧಿಕಾರಿ, ಮತ್ತು 18. ಸಾಮಂತದುರ್ಗ ಪುರಾಂತರ ರಾಜಗೃಹಾಧಿಕಾರಿ.

ಉಪ ಪದಾಧಿಕಾರಿಗಳು : ಮಹಾನಸಾಧಿಕಾರಿ, ಮಜ್ಜನ ಗೃಹಾಧಿಕಾರಿ, ಧಾನ್ಯಾಧಿಕಾರಿ, ಬೆಹಿಂಚಾವಡಿ ಅಮೃತಮಹಲ ಅಧಿಕಾರಿ, ಗೋಶಾಲಾಧಿಕಾರಿ, ಜಿನಸಿಧಾತು ಕೋಶಾಧಿಕಾರಿ, ಅಶ್ವಶಾಲಾಧಿಕಾರಿ, ಅರಾಮಧಿಕಾರಿ, ಬಿರುದು ಲಾಂಛನಾಧಿಕಾರಿ, ದೀಪಶಾಲಾಧಿಕಾರಿ, ರಥಶಾಲಾಧಿಕಾರಿ ನಾನಾ ವಿದ್ಯಾಜಕಿತ್ ಅಧಿಕಾರಿ, ಪುಸ್ತಕ ಶಾಲಾಧಿಕಾರಿ, ದ್ವಾರಕಂಚುಕಿ ಜನಾಧಿಕಾರಿ, ಆಯುಧ ಶಾಲಾಧಿಕಾರಿ ಮತ್ತು ವಿದ್ಯಾಶಾಲಾಧಿಕಾರಿ. ಇವರುಗಳಲ್ಲದೆ 4 ಧರ್ಮಾಧಿಕಾರಿಗಳನ್ನು ನೇಮಕ ಮಾಡಿದ್ದರು. ಅವರುಗಳೆಂದರೆ

1. ಕಂದಾಚಾರ್ ಕಚೇರಿ ಭಕ್ಷಿ ಚಲುವೇ ಅರಸು, 2. ತೋಷಿಖಾನ್ ಸಿದ್ಧರಾಜೇ ಅರಸು 3. ಜಿಲ್ಲೋ ಕಛೇರಿ ಬಕ್ಷಿ ಚಾಮಪ್ಪಾಜಿ ಅರಸು, 4. ಮಹಲತ್ಕಚೇರಿ ಬಾಬುರಾಯರು, 5. ಖಜಾನ್ ಬಕ್ಷಿ ನರಸಪ್ಪ, 6. ಸವಾರ್ ಕಚೇರಿ ಭಕ್ಷಿ ಭಿಮರಾಯ, ಮತ್ತು 7. ಅಣ್ಣಾಜಿರಾಯರು, 8. ಷಾಗಿರ್ದ್ ಪೇಶು ಕಛೇರಿ ಭಕ್ಷಿ ಅಣ್ಣಾಜಿರಾಯರು, 9. ಬಾರ್ ಕಛೇರಿ ಭಕ್ಷಿ ಹಾಗೂ ಬ್ಯಾಳೆರಾಮರಾಯರು, 10. ಕಂದಾಚಾರ್ ಕಚೇರಿ ಬಕ್ಷಿ ಜೀವುಣರಾಯರು. 11. ಮೋದಿಖಾನ ಭಕ್ಷಿ ನರಸಿಂಗರಾಯ, 12. ಲೌಕಿಕ ವಿದ್ವಾಂಸರ ಭಕ್ಷಿ ಸಂತೋಜಿ ಸುಬ್ಬರಾಯ, 13. ಷಹ ನಂಜಪ್ಪನವರು, 14. ಖಾಸ್ ಬೊಕ್ಕಸದ ದುಯಂಭಕ್ಷಿ ಸುಬ್ಬರಾವ್, 15. ಅಷ್ಟಗ್ರಾಮದ ಪೌಜುದಾರ್ ವೆಂಕಟರಮಣಯ್ಯ, 16. ಫಿರ್ಯಾದು ಕಚೇರಿ ಭಕ್ಷಿ ಮೀರಮಹಮದ್‌ಸಾಬು, 17. ನಗರದ ಫೌಜುದಾರ್ ಸರ್ವೋತ್ತಮರಾವ್ 18. ಕಮಠೀ ಭಕ್ಷಿ ಬಾಕರ್ ಸಾಬು ಮತ್ತು 19. ಮೇಖರೀ ಮೌದಿನ್‌ಸಾಬು, 20 ಬಾರೀಗಾಟು ಭಕ್ಷಿ ಪುಟ್ಟಬಸಪ್ಪಾಜಿ, 21. ಅಂಚೆ ಮಲ್ಲಪ್ಪಾಜಿಯವರು, 22. ಜಿಲ್ಲೋಕಚೇರಿ ಭಕ್ಷಿ ಅರೆಪುರದ ಬಸಪ್ಪಾಜಿಯವರು, 23. ಖಾಸ್ ಮುನಿಷೀ ಭಾಗವತ ನಾರಣಪ್ಪನವರು, ಮುಸಾಹೇಬರುಗಳು– ಗಂಗಾದರರಾವ್, ವ್ಯಾಸರಾವ್ ಖಿಲ್ಲೇ ಕಛೇರಿ ತಿಪ್ಪಯ್ಯ, ಮತ್ತು ಅಣಿ ರಾಮರಾಯರು.

1800–1801ರಲ್ಲಿ ಮೈಸೂರು ಸಂಸ್ಥಾನದ ವರಮಾನ 65 ಲಕ್ಷ ಇತ್ತು. ಅದರಲ್ಲಿ 24.5 ಲಕ್ಷ ರೂಪಾಯಿಗಳು ಸಬ್ಸಿಡಿಯಾಗಿಯೂ 15.5 ಲಕ್ಷ ರೂಪಾಯಿಗಳು ಮಿಲಿಟರಿ ವ್ಯವಸ್ಥೆಗೂ, 5 ಲಕ್ಷ ಇತರೇ ಖರ್ಚಿಗೂ ಆಗುತ್ತಿತ್ತು. ಇದಲ್ಲದೆ, ದಿವಾನ್ ಪೂರ್ಣಯ್ಯನವರಿಗೆ ಮಾಹೆಯಾನ 1500 ರೂಪಾಯಿ ಸಂಬಳದ ರೂಪದಲ್ಲಿಯೂ ಅಲ್ಲದೆ ಕಂದಾಯದ ಮೂಲಕ ವಸೂಲಾದ ಹಣಕ್ಕೆ ಶೇಕಡ ಒಂದರಂತೆ ಕಮೀಷನ್. ಈ ಲೆಕ್ಕದಂತೆ ಆರು ಸಾವಿರ ಕಂಠೀರಾಯಿ ಪಗೋಡ ಸಂಬಳದ ರೂಪದಲ್ಲೂ 19000 ಕಂಠೀರಯ ಪಗೋಡ ಕಮೀಷನ್ ಆಗಿಯೂ (75,000 ರೂಪಾಯಿಗಳು) ಸಾಲಿಯಾನ ಕೊಡಲಾಗುತ್ತಿತ್ತು.

ಮುಮ್ಮಡಿ ಶ್ರೀ ಕೃಷ್ಣರಾಜ ಮಹೀಪಾಲರು ದಿವಾನ್ ಪೂರ್ಣಯ್ಯನವರನ್ನು 1811ನೇದಿಸೆಂಬರ್ ಆಖೈರಿಗೆ ನಿವೃತಗೊಳಿಸಿ ತಾವೇ ಸ್ವತಂತ್ರರಾಗಿ 1812 ರಿಂದ 1831ರ ಅಕ್ಟೋಬರ್ ಆಖೈರ್ ವರೆವಿಗೆ ರಾಜ್ಯಾಡಳಿತವನ್ನು ಮಾಡಿದರು. ಸಂಸ್ಥಾನದಲ್ಲಿ 32,425 ಗ್ರಾಮಗಳು, 92 ಕೋಟೆಗಳು ಮತ್ತು 31 ಗಿರಿದುರ್ಗಗಳಿದ್ದುವು.

ಅವರ ಕಾಲದಲ್ಲಿ ಸ್ಥಾಪಿತವಾದ ಕಛೇರಿಗಳು 18. ಈ ಕಛೇರಿಗಳು ಮೊಗಲ್ ಬಾದುಶಹರ ಆಳ್ವಿಕೆಯ ಕಾಲದಲ್ಲಿ ಅನುಸರಿಸುತ್ತಿದ್ದ ರೀತಿಯಲ್ಲಿಯೇ ಸ್ಥಾಪಿತವಾದವು. ಅವುಗಳ ವಿವರ : 1. ದಿವಾನ ಕಛೇರಿ, 2. ಖಿಲ್ಲೇ ಕಛೇರಿ, 3. ಕಟ್ಟೆ ಕಛೇರಿ, 4. ಬಾರ್ಗೀರ್ ಕಛೇರಿ, 5, ಸಂದಲ್ ಕಛೇರಿ, 6. ಸವಾರ್ ಕಛೇರಿ, 7. ತೋಷಿಕಾನೆ, 8. ಕಮೀಟಿ ಕಛೇರಿ, 9. ಫಿರ್ಯಾದ್ ಕಛೇರಿ, 10. ಮೋದಿಖಾನೆ, 11. ಕಂದಾಚಾರ್ ಕಛೇರಿ, 12. ಬಾರ್ ಕಛೇರಿ, 13. ಭಾರಿಘಾಟ್ ಕಛೇರಿ, 14. ದುಯಂಬಾರ್ ಕಛೇರಿ, 15. ದಿನಷೀ ಕಛೇರಿ, 16. ಅಂಚೆ, ಅಮೃತಮಹಲ್ ಕಛೇರಿ, 17. ಷಾಗೀರ್ದ್ ಪೇಷ್ ಕಛೇರಿ, 18. ಜಿಲ್ಲೋ ಕಛೇರಿ.

ಖಾಸಾ ಚಾಮರಾಜ ಒಡೆಯರ ಪುತ್ರರಾದ ನಂಜರಾಜಾಭಿದ ಮುಮ್ಮಡಿ ಶ್ರೀ ಕೃಷ್ಣರಾಜ ಮಹೀಪಾಲರ ಆಳ್ವಿಕೆಯ ಕಾಲದಲ್ಲಿ ಅವರ ಆಡಳಿತಕ್ಕೆ ಒಳಪಟ್ಟಿದ್ದ 125 ತಾಲ್ಲೂಕುಗಳಿಂದ ಕಂದಾಯ ವಗೈರೆಗಳನ್ನು ವಸೂಲಿ ಮಾಡಲು ಆರು ಫೌಜುದಾರಿಗಳನ್ನು ನೇಮಕ ಮಾಡಿದ್ದರು. ಒಂದು ಗಡಿಗೆ ಒಂದು ತಾಲ್ಲೂಕು ಸಮ. ಒಂದು ಗಡಿಗೆ ಒಬ್ಬ ಸುಭೇದಾರ, ಇಬ್ಬರು ಶಿರಸ್ತೆದಾರರು, ಇಬ್ಬರು ಗುಮಾಸ್ತರು, ಮುನಿಷಿಗಳು, ರಾಯಸದವರು, ಬಹುಮಂದಿ ವಾಲೆಕಾರರು. ಒಂದು ಖಿಲ್ಲೆಗೆ ಒಬ್ಬ ಖಿಲ್ಲೇದಾರ, ಇಬ್ಬರು ಶಿರಸ್ತೆದಾರರು, ಅಂಚೆ ಊಳಿಗದವರಿಗೆ ಗೊತ್ತುಗಾರರಾಗಿ ಅಂಚೆ ಗುರಿಕಾರರು, ಕೊತ್ವಾಲ ಚಾವಡಿಯಂತಹ ಅನೇಕ ಚಾವಡಿಗಳು ಗ್ರಾಮಕ್ಕೆ ಶ್ಯಾನುಭೋಗ, ಶೇಖದಾರ ಹೀಗೆ ಅನೇಕ ಸೇವಾಜನಗಳನ್ನು ನೇಮಕ ಮಾಡಿದ್ದರು.

125 ತಾಲ್ಲೂಕುಗಳನ್ನು ದಕ್ಷತೆಯಿಂದ ನೋಡಿಕೊಳ್ಳಲು ಸ್ಥಾಪಿತವಾದ 6 ಫೌಜದಾರಿಗಳ ವಿವರ:

1. ಅಷ್ಟಗ್ರಾಮದ ತುಕಡಿ – ಇದರಲ್ಲಿ 28 ತಾಲೋಕುಗಳು ಇದ್ದವು.

2. ಬೆಂಗಳೂರು ತುಕಡಿ – 28 ತಾಲೋಕುಗಳು

3. ಚಿತ್ರದುರ್ಗದ ತುಕಡಿ – 13 ತಾಲೋಕುಗಳು

4. ಮುಜರಾಬಾದ್ ತುಕಡಿ – 13 ತಾಲೋಕುಗಳು

5. ನಗರದ ತುಕಡಿ – 24 ತಾಲೋಕುಗಳು

6. ಮದ್ದಗಿರಿ ತುಕಡಿ – 19 ತಾಲೋಕುಗಳು

ಈ ತಾಲೋಕುಗಳಿಂದ ವಸೂಲಾದ ಕಂದಾಯ ವಗ್ಯೆರೆಗಳನ್ನು ರಾಜ ಬೊಕ್ಕಸಕ್ಕೆ ಸಲೀಸಾಗಿ ಜಮಾ ಮಾಡಲು ಆರು ಫೌಜುದಾರರು ನೇಮಕವಾಗಿದ್ದರು. ಮುಮ್ಮಡಿಯವರ ಕಾಲದಲ್ಲಿ ಅರಮನೆಯಲ್ಲಿದ್ದ ತೋಟ್ಟಿಗಳು : ದಿವಾನಕಾನೆಗಳು ಮತ್ತು ವಿಳಾಸಗಳು 25. ಅವುಗಳ ವಿವರ:

1. ಲಕ್ಷ್ಮೀವಿಲಾಸ, 2. ಕರಿಕಲ್ಲು ತೊಟ್ಟಿ, 3. ರಮಾವಿಲಾಸ, 4. ಕೃಷ್ಣವಿಲಾಸ, 5. ಸೀತಾವಿಲಾಸ, 6. ಮದನವಿಲಾಸ, 7. ಚಂದ್ರವಿಲಾಸ, 8. ಮನೋವಿಲಾಸ, 9. ರಾಜೇಂದ್ರ ವಿಲಾಸ, 10. ಕಮಾನು ತೊಟ್ಟಿ, 11. ಬೊಕ್ಕಸದ ತೊಟ್ಟಿ, 12. ಹೊಸ ತೊಟ್ಟಿ, 13. ಒಂಬತ್ತು ಚಿನ್ನದ ಕಂಬಗಳಿಂದಲೂ, ನವರಾತ್ರಿ ಓಲಗದ ಸಜ್ಜೆ, ಒಂದು ಧ್ವಜದಿಂದಲೂ ಅಲಂಕೃತವಾದ ಬಂಗಲೆ, 14. ಕಾಂತವಿಲಾಸ, 15. ಚಾಮುಂಡೇಶ್ವರಿ ತೊಟ್ಟಿ, 16. ಆವಾಹಿರೊ, ಚಿನ್ನ, ಬೆಳ್ಳಿ ಕೊಠಡಿಗಳಿಂದ ಅಲಂಕೃತವಾದ ಅಂಬಾ ವಿಲಾಸ 17. ದರ್ಬಾರ್ ಬಾಲಾಖಾನೆ, 18. ಮಹಾಮಾತೃಶ್ರೀ ಯವರ ಸನ್ನಿದಾನಂಗಳ ತೊಟ್ಟಿಗಳು, 19. ಆಮತದ ತೊಟ್ಟಿ, 20. ಸಮುಖದ ತೊಟ್ಟಿ, 21. ಕನ್ನಡಿ ತೊಟ್ಟಿ, 22. ಕುದುರೆ ಸವಾರಿ ತೊಟ್ಟಿ, ಆಟದ ಭುವನೇಶ್ವರಿ ಸಹಾ 23. ಆತ್ಮವಿಲಾಸ, 24. ರಂಗಮಂಟಪದ ತೊಟ್ಟಿ, 25. ಯುವರಾಜ ನಂಜರಾಜ ಬಠಹದವರ ದಿವಾನಕಾನೆ.

ಅರಮನೆ ಫಿರ್ಕಾಗಳ ವಿವರ: ಅರಸುಗಳಲ್ಲೂ 3. ಸಮುಖದ ಊಳಿಗ, ಕಾಸಾ ಬಿಡದಿ, ಹಾಸಿಗೆ ಬೊಕ್ಕಸ, ಇಟ್ಟೀಊಳಗ, ಚಾಮುಂಡೇಶ್ವರಿ ತೊಟ್ಟಿ ಮುಸದ್ದೀರು, ಅಂಬಾ ವಿಲಾಸ ಮತ್ತು ಶಿಲಾಯಂತ್ರ, ಕಾರ್ಖಾನೆ, ಖಾಸಾ ಚಮನ್, ಮಧುವನ ಮುಂತಾದವು, ಅವಸರದ ಹೋಬಳಿ, ಕಾಸಾ ತಬೇಲಿ, ಪೀಲ್‌ಖಾನೆ, ಶ್ರೀರಂಗಪಟ್ಟಣದ ಖಾಸಾ ಮಹಲು ತೋಟಗಳು, ಮುಂತಾದವು.

4

ಅಂಚೆ, ಗೋಕಾಯಿ, ಅಮೃತ ಮಹಲ್, ಸಮ್ಮುಖದ ಕರೆಯುವ ಹಟ್ಟಿ, ಗೊಲ್ಲರು, ವೀಣೆ, ಸಂಗೀತಗಾರ ಹಾಗೂ ವೈದ್ಯರೂ ಸಹ, ಖಾಸಾ ಬೊಕ್ಕಸ, ಕತ್ತಿ ಬೊಕ್ಕಸ, ಕಾಣಿಕೆ ಬೊಕ್ಕಸ, ಸರಸ್ವತಿ ಭಂಡಾರ. ಇವೇ ಮುಂತಾದ ಫಿರ್ಕಾಗಳು ಇದ್ದವು.

ಮುಮ್ಮಡಿ ಶ್ರೀ ಕೃಷ್ಣರಾಜರು ತಮ್ಮ 20 ಪತ್ನಿಯರ ಒಡಗೂಡಿ ಸಕಲ ಭೋಗಭಾಗ್ಯಗಳನ್ನು ಅನುಭವಿಸುತ್ತಿದ್ದ ಸಮಯದಲ್ಲಿ, ಕರಿಕಲ್ಲು ತೊಟ್ಟಿಯಲ್ಲಿ ಅವರ ದ್ವಿತೀಯ ಪುತ್ರರಾದ ಯುವರಾಜ ನಂಜರಾಜ ಬಹದ್ದೂರರವರು ಮತ್ತು ಅವರ ಕುಟುಂಬ ವರ್ಗದವರೂ, ಮದನವಿಲಾಸದ ತೊಟ್ಟಿಯಲ್ಲಿ ಸೇನಾಪತಿ ಚಾಮರಾಜ ಒಡೆಯರ್ ಬಹದ್ದೂರರವರು ಮತ್ತು ಅವರ ಕುಟುಂಬ ವರ್ಗದವರು, ಲಕ್ಷ್ಮೀವಿಲಾಸದಲ್ಲಿ ಲಕ್ಷ್ಮೀವಿಲಾಸದ ದೇವಾಜಮ್ಮಣ್ಣಿಯವರೂ, ರಮಾವಿಲಾಸದಲ್ಲಿ ರಮಾವಿಲಾಸದ ಚೆಲುವಾಜಮ್ಮಣ್ಣಿಯವರೂ, ಕೃಷ್ಣವಿಲಾಸದಲ್ಲಿ ಕೃಷ್ಣವಿಲಾಸದ ಲಿಂಗಾಜಮ್ಮಣ್ಣಿಯವರೂ, ಮನೋವಿಲಾಸದಲ್ಲಿ ಮನೋವಿಲಾಸದ ದೇವೀರಮ್ಮಣ್ಣಿಯವರೂ ಹಾಗೂ ಅವರ ಕುಟುಮಬ ವರ್ಗದವರೂ, ರಾಜಯೋಗ್ಯವಾದ ಸಕಲ ಮರ್ಯಾದೆ ಹಾಗೂ ಸವಲತ್ತುಗಳನ್ನು ಅನುಭವಿಸುತ್ತಾ ಸುಖದಿಂದ ಇದ್ದರು. ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರ ಅಳಿಯಂದರುಗಳಾದ, ಖಾಸಾ ಅಳಿಯ ಸುಬ್ಬರಾಜ ಅರಸಿನವರು, ಮತ್ತು ಖಾಸಾ ಅಳಿಯ ನಂಜರಾಜೇ ಅರಸಿನವರೂ ಇವರುಗಳಿಗೆ, ಪ್ರತ್ಯೇಕ ಪ್ರತ್ಯೇಕವಾದ ದಿವ್ಯವಾದ ಭವನಗಳಲ್ಲಿ ಸಕಲ ಸೌಲತ್ತುಗಳನ್ನು ಒದಗಿಸಿಕೊಟ್ಟು, ಅವರುಗಳು ಸುಖದಿಂದ ಇರುವಂತೆ ಏರ್ಪಾಟು ಮಾಡಿದ್ದರು.

ಮುಮ್ಮಡಿ ಕೃಷ್ಣರಾಜರ ಆಳ್ವಿಕೆಯ ಕಾಲದಲ್ಲಿ ರಾಜ್ಯದ ಸರಾಸರಿ ಆದಾಯವು ಹಿಗಿತ್ತು:

1800–1810ರ ವರೆವಿಗೆ 86.75 ಲಕ್ಷ ರೂಪಾಯಿಗಳು.

1810–1820ರ ವರೆವಿಗೆ 86.25 ಲಕ್ಷ ರೂಪಾಯಿಗಳು

1820–1830ರ ವರೆವಿಗೆ 76.00 ಲಕ್ಷ ರೂಪಾಯಿಗಳು

1867–1868ರ ವರಮಾನ 1,08,78272 ಖರ್ಚು ರೂ. 1,16,69132

ಮೈಸೂರು ನಗರದಲ್ಲಿರುವ ಜಗನ್ಮೋಹನ ಮಹಲನ್ನು ಮುಮ್ಮಡಿ ಕೃಷ್ಣರಾಜ ಒಡೆಯರವರು ಸನ್ 1861ನೇ ಅಕ್ಟೋಬರ್ ತಾ. 13 ರಂದು ನಿರ್ಮಾಣ ಮಾಡಿದ ಬಗ್ಗೆ ಜಗನ್ಮೋಹನ ಮಹಲಿನಲ್ಲಿರುವ ಶಾಸನದ ವಿವರವು ಹೀಗಿದೆ.

"ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ 1784ನೇ ದುರ್ಮತಿ

ಸಂವತ್ಸರದ ಆಶ್ವೀಜ ಶುದ್ಧ 10 ಭಾನುವಾರಕ್ಕೆ ಸರಿಯಾಗಿ ಸನ್ 1861ನೇ ಅಕ್ಟೋಬರ್ ತಾ. 13 ರಲ್ಲು, ಆಳಿದ ಮಹಾಸ್ವಾಮಿಯವರಿಂದ ನಿರ್ಮಾಣ ಮಾಡಿಸಲ್ಪಟ್ಟ ಖಾಸಾ ಜಗನ್ಮೋಹನ ಮಹಲು".

ಜಗನ್ಮೋಹನ ಬಂಗಲೆಗೆ ಆ ಹೆಸರು ಬರುವುದಕ್ಕೆ ಕಾರಣವು ಬಹಳ ಸ್ವಾರಸ್ಯವಾಗಿದೆ. ಅರಮನೆಯ ಅಂಬಾವಿಲಾಸದಲ್ಲಿ ರಾಮಕೃಷ್ಣಪ್ಪನವರು ಶಿರಸ್ತೇದಾರರ ಕೆಲಸ ನಿರ್ವಹಿಸುತ್ತಿದ್ದರು. ಇವರನ್ನು ಕಂಡರೆ ಅರಮನೆಯಲ್ಲಿ ಎಲ್ಲರೂ ಬಹಳ ಮರ್ಯಾದೆಯನ್ನು ತೋರಿಸುತ್ತಿದ್ದರು. ಮೇಲೆ ತಿಳಿಸಿದ ಶಾಸನದ ಪ್ರಕಾರ ಜಗನ್ಮೋಹನ ಬಂಗಲೆಯ ನಿರ್ಮಾಣ ಕಾರ್ಯ ಪೂರೈಸಿದಾಗ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರು ರಾಮಕೃಷ್ಣಪ್ಪನವರನ್ನು ಕುರಿತು ಮೇಲೆ ತಿಳಿಸಿದಂತೆ ನಿರ್ಮಾಣವಾದ ಬಂಗಲೆಗೆ ಯಾವ ಹೆಸರನ್ನು ಇಟ್ಟರೆ ಒಪ್ಪುತ್ತದೆ ಎಂದು ಕೇಳಿದರು. ಅದಕ್ಕೆ ಪ್ರತ್ಯುತ್ತರವಾಗಿ ಕೃಷ್ಣಪ್ಪನವರು, ಏನು ಅರಿಕೆ ಮಾಡಲಿ ಮಹಾಸ್ವಾಮಿ. ಬಂಗಲೆ ಜಗನ್ಮೋಹಕವಾಗಿದೆ, ಎಂದರಂತೆ. ಮುಮ್ಮಡಿ ಕೃಷ್ಣರಾಜ ಒಡೆಯರು ಸಂತೋಷಪಟ್ಟು ಆ ಬಂಗಲೆಗೆ ಜಗನ್ಮೋಹನ ಬಂಗಲೆ ಎಂದೇ ಹೆಸರಿಡಲು ನಿರ್ಧರಿಸಿದರು.

ಮೈಸೂರು ನಗರದಲ್ಲಿರುವ ಜಗನ್ಮೋಹನ ಬಂಗಲೆಯಲ್ಲಿ ಮೈಸೂರು ಒಡೆಯರ ವಂಶಾವಳಿ ವಿಚಾರವಾಗಿ, ಬಂಗಲೆಯ ಮೇಲಂತಸ್ತಿನಲ್ಲಿ ಪೂರ್ವಾಭಿಮುಖವಾಗಿ ಒಂದು ವಿಶಾಲವಾದ ಬಿತ್ತಿ ಚಿತ್ರವು ಇದೆ. ಬಲಭಾಗದ ಕೊಠಡಿಯಲ್ಲಿ ಪಶ್ಚಿಮಾಭಿಮುಖವಾಗಿ ಇರುವ ಬಿತ್ತೀ ಚಿತ್ರದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರವರ ಸಂತಾನ ವೃಕ್ಷದ ವಿವರಣೆ ಇದೆ.

ಕೆಳಗಡೆ ಹಜಾರದಲ್ಲಿ ಎರಡು ವರ್ಣರಂಜಿತವಾದ ಭಾವಚಿತ್ರಗಳಿವೆ. ಅವುಗಳ ಕ್ಯಾಟಲಾಗ್ ನಂಬರುಗಳು 60 ಮತ್ತು 72. ಕ್ಯಾಟಲಾಗ್ ನಂಬರ್ 60ರಲ್ಲಿ 13 ವ್ಯಕ್ತಿಗಳ ಭಾವಾಚಿತ್ರಗಳಿವೆ. ಮೇಲುಭಾಗದಲ್ಲಿ ರಾಜೊಡೆಯರು, ರಣಧೀರ ಕಂಠೀರವ ನರಸರಾಜ ಒಡೆಯರು. ದೊಡ್ಡದೇವರಾಜ ಒಡೆಯರು, ಹಾಗೂ ಚಿಕ್ಕದೇವರಾಜ ಒಡೆಯರ ಭಾವಚಿತ್ರವಿದೆ, ಇದರ ಕೆಳಗೆ ಶ್ರೀಮುಮ್ಮಡಿ ಶ್ರೀಕೃಷ್ಣರಾದ ಒಡೆಯರವರು ಅವರು ಪುತ್ರರಾದ ಪ್ರಿನ್ಸ್ ಚಾಮರಾಜ ಒಡೆಯರ್ ಮತ್ತು ಪ್ರಿನ್ಸ್ ನಂಜರಾಜ ಬಹದ್ದೂರರವರು ಹಾಗೂ ಮುಮ್ಮಡಿ ಶ್ರೀಕೃಷ್ಣರಾಜ ಒಡೆಯರವರ ಅಳಿಯಂದರಾದ ಲಿಂಗರಾಜ ಅರಸಿನವರು, ದೇವರಾಜ ಅರಸಿನವರು, ಕೃಷ್ಣೆ ಅರಸಿನವರು, ಸುಬ್ಬರಾಜ ಅರಸಿನವರು ಮತ್ತು ನಂಜರಾಜ ಅರಸಿನವರು ಹಾಗೂ ಸನ್ನಿಧಾನದ ದೇವರಾಜ ಬಹದ್ದೂರರವರ ಭಾವಚಿತ್ರಗಳಿವೆ. ಇದರ ಕೆಳಗೆ ದಿವಂಗತ ಮಹಾರಾಜರಾದ ಶ್ರೀ

ಮುಮ್ಮಡಿ ಕೃಷ್ಣರಾಜ ಒಡೆಯರವರೂ ಹಾಗೂ ಅವರ ಸರದಾರರುಗಳು ಎಂದು ಬರೆದಿದೆ.

ಕ್ಯಾಟಲಾಗ್ 72ರಲ್ಲಿ ಯದುರಾಯರಿಂದ ಹಿಡಿದು ಮುಮ್ಮಡಿ ಶ್ರೀಕೃಷ್ಣರಾಜ ಒಡೆಯರವರೆಗಿನ ಹಾಗೂ ಅವರ ಪುತ್ರ, ಪೌತ್ರ, ಪ್ರಪೌತ್ರರ ಮತ್ತು ಅಳಿಯಮದಿರುಗಳ 13 ಭಾವಚಿತ್ರವಿದ್ದು ಒಟ್ಟು 35 ಭಾವಚಿತ್ರಗಳಿವೆ. ಅದರ ವಿವರವು ಹೀಗಿದೆ:

ಖಾಸ ಮುಮ್ಮಡಿ ನಂಜರಾಜಾಂಕಿತ ಕೃಷ್ಣರಾಜೇಂದ್ರ ಒಡೆಯ ಬಹದ್ದೂರ್‌ರವರು

**ಶ್ರೀ ಚಾಮರಾಜೇಂದ್ರ ಧರ್ಮಪತ್ನಿ ಕೆಂಪನಂಜಾಂಬಿಕ**
**ಗರ್ಭಸುಧಾಂಬುಜ ಪ್ರರಾಕಾಸುಧಾಕರಾಯ ಮಾನ ಮಹಿಮಾಂಶು**
**ಜುವ ವರಾಧಿಶ ದಿವ್ಯರತ್ನ ಸಿಂಹಾಸನಾರೂಢ ಆದಿ**
**ಎದುರಾಯಾದಿ ದೊರೆಗಳು 21 ರಿಂದ**
**ಸಮೇತವಾಗಿ ಶ್ರೀ ಚಾಮುಂಡಾಂಭವರಪ್ರಸಾದೋದ್ಭವ**
**ನಂಜರಾಜಾಂಕಿತ ಮುಮ್ಮಡಿ ಶ್ರೀಕೃಷ್ಣರಾಜೇಂದ್ರ ಒಡೆಯ**
**ಬಹದ್ದೂರವರು, ಪುತ್ರಪೌತ್ರರು, ಅಳಿಯಂದಿರು**
**ಮತ್ತು ಪುಟ್ಟಮಲ್ಲಪ್ಪನವರು ಸಮೇತವಾಗಿ 14 ರಿಂದ ಕೂಡಿ**
**35 ಭಾವಚಿತ್ರದಲ್ಲಿ ವಿರಾಜಿಸುತ್ತಿದ್ದಾರೆ.**

1ನೇ ಸಾಲಿನಲ್ಲಿ : 1. ಚಾಮರಾಜ ಅರಸು ಬಹದ್ದೂರರವರು
2. ಸೇನಾಧಿಪತಿ ನಂಜರಾಜ ಬಹದ್ದೂರವರು
3. ಸೇನಾಪತಿ ಚಾಮರಾಜ ಬಹದ್ದೂರವರು
4. ಯುವರಾಜ ದೇವಪಾರ್ಥಿವರಾಜ ಬಹದ್ದೂರವರು
5. ಯುವರಾಜ ನಂಜರಾಜ ಬಹದ್ದೂರವರ
6. ದೇವರಾಜ ಬಹದ್ದೂರವರು
7. ಚಾಮರಾಜ ಬಹದ್ದೂರವರು

ಎಡದಿಂದ ಬಲಕ್ಕೆ :1. ಅಳಿಯ ಕೃಷ್ಣೇ ಅರಸಿನವರು
2. ಅಳಿಯ ನಂಜರಾಜೇ ಅರಸಿನವರು
3. ಅಳಿಯ ಸುಬ್ಬರಾಜೇ ಅರಸಿನವರು
4. ಅಳಿಯ ದೇವರಾಜೇ ಅರಸಿನವರು

5. ಅಳಿಯ ಲಿಂಗರಾಜೇ ಅರಸಿನವರು

6. ಸಂ : ದೇವರಾಜ ಬಹದ್ದೂರವರು

ಮುಮ್ಮಡಿ ಶ್ರೀ ಕೃಷ್ಣರಾಜ ಮಹೀಪಾಲರು ಯುವರಾಜ ನಂಜರಾಜ ಒಡೆಯರ್ ಬಹದರವರಿಗೆ ಪ್ರೀತಿಪೂರ್ವಕವಾಗಿ ಕೊಟ್ಟಿದ್ದ ಚಾಮರಾಜನಗರ ತಾಲೋಕ್ ಎಂದು ಇನ್ನೊಂದು ಭಾವಚಿತ್ರವಿದೆ. ಕ್ಯಾಟಲಾಗ್ 60 ಮತ್ತು 72ರಲ್ಲಿ ಭಾವಚಿತ್ರಗಳ ಸುತ್ತಲೂಚಿನ್ನದ ಮುಲಾಮಿನಿಂದ ಕಲಾತ್ಮಕವಾಗಿ ರೂಪಿಸಲಾಗಿದೆ. ಇದಲ್ಲದೆ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರ ಪುತ್ರರಾದ ಯುವರಾಜ ನಂಜರಾಜ ಒಡೆಯರ್ ಬಹದ್ದೂರವರ ಭಾವಚಿತ್ರವೂ ಕೂಡ ಮೇಲಂತಸ್ತಿನ ಕೊಠಡಿಯಲ್ಲಿ ಇದೆ.

ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರ್‌ರವರ ಸಂತಾನ ವೃಕ್ಷದ ವಿವರಣೆಯನ್ನು ತಿಳಿಸುವ ಸಂತಾನ ಕಲ್ಪ ಥ್ರುಯಭಿತ್ತಿ ಚಿತ್ರ ಕಾಲ 1860

ಮೇಲ್ಭಾಗದಲ್ಲಿ : ಶ್ರೀಮನ್ಮಹಾವಿಷ್ಣು ಮೊದಲಾಗಿ ಶ್ರೀಕೃಷ್ಣರಾಜ ಮಹಾರಾಜೇಂದ್ರ ಕಂಠೀರವರ ವಂಶಾವತರಣ ವೈಭವ ವಿವರಣದ ಪದ್ಯ ಗದ್ಯ ಸಹಾ ಬರೆದು 1 ಪತ್ನೀರು, ಪುತ್ರರು, ಪೌತ್ರರು, ಪ್ರಪೌತ್ರರು, ದೌಹಿತ್ರು ಸಹಾ ಕಲ್ಪವೃಕ್ಷ-ಭಾವದೊಳ್ ತಿಳಿಯುವಂತೆ ಬರೆಸಲಾಗಿದೆ.

ಒಂದು ವೃತ್ತದ ಒಳಗಡೆ ವೃತ್ತಾಕಾರವಾಗಿ ಒಂದು ಶ್ಲೋಕವನ್ನು ಹೀಗೆ ಬರೆದಿದೆ.

ಭಸಿತಲಸಿತಫಾಲಂ ರಮ್ಯರುದ್ರಾಕ್ಷ ಮಾಲಂ । ಕನಕಮಯ ಸುಚೆಲಂ ಕಾಮನೀಯ ಸ್ವಲೀಲಂ । ಸದವನ ಪರಿಶೀಲಂ ಚಾರು ಚಾಮೇಂದ್ರ ಬಾಲಂ । ಹೃದಯಿ ಕಮಲ ಮಧ್ಯೆ ಸಂತತಂ ಭಾವಯಾಮಿ ॥

ಮಧ್ಯ ಭಾಗದಲ್ಲಿ ಮುಮ್ಮಡಿ ಶ್ರೀ ಕೃಷ್ಣರಾಜ ಮಹೀಪಾಲರು ಸಿಂಹಾಸನರೂಢರಾಗಿ ವಿರಾಜಿಸುತ್ತಿರುವ ಭಾವಚಿತ್ರವಿದೆ. ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರ ಸುತ್ತಲೂ ಅವರ 20 ಪತ್ನಿಯರುಗಳ ಹೆಸರನ್ನು ಹಾಗೂ ಅವರುಗಳ ಸಂತಾನ ವಿವರವನ್ನು ಹೀಗೆ ತಿಳಿಸಿದೆ :

1. ಪಟ್ಟಮಹಿಷಿ ದ್ಯಾವಾಜಾಂಬಾ, ಸಂತಾನವಿಲ್ಲ
2. ಲಕ್ಷ್ಮೀವಿಲಾಸದ ದೇವಾಂಬಾ, ಸಂತಾನವಿಲ್ಲ
3. ರಮಾವಿಲಾಸದ ಚೆಲುವಾಂಬಾ, ಪುತ್ರಿ : ಕೆಂಪಚಾಮಮಣಿ
4. ಕೃಷ್ಣ ವಿಲಾಸದ ಲಿಂಗಾಜಮಾಂಬಾ

5. ಸೀತಾವಿಲಾಸ ದೇವಾಜಾಂಬಾ

6. ಲಕ್ಷ್ಮಾಂಬಾ

7. ಬೊಕ್ಕಸ ತೊಟ್ಟಿ ಪುಟ್ಟಗೌರಾಂಬಾ

8. ಚಂದ್ರಶಾಲಾ ತೊಟ್ಟಿ ಮಲ್ಲಿಗಾಂಬಾ

9. ಮದನವಿಲಾಸ ತೊಟ್ಟಿ ಮುದ್ದಲಿಂಗಾಂಬಾ

ಪುತ್ರಿ : ದ್ಯಾವಾಜ್ಜಮ್ಮಣ್ಣಿ ಸಪತ್ನಿ ಸಾಕುಪುತ್ರಿ ದ್ಯಾವಾಜಂಮಂಣಿ ಪ'ಾ ತ್ರ ಸೇನಾಪತಿ ಚಾಮರಾಜ

ಇವರ ಜನನ : ಶಕ 1738

ಓರಿಯ ಪತ್ನಿ ಕೆಂಪನಂಜಮಂಣಿ ಪುತ್ರರು 2 ಯು.ಸಂ. ಫಾಲ್ಗುಣ ಬಹುಳ

ಸೇನಾಪತಿ ನಂಜರಾಜ ಬಹದ್ದೂರವರು ಮತ್ತು 10 ಶನಿವಾರ, ಪತ್ನಿಯರು 4,

ದೇವರಾಜ ಬಹದ್ದೂರವರು ಪುತ್ರರು 4, ಪುತ್ರಿ 1

ಸೇನಾಪತಿ ನಂಜರಾಜ ಬಹದ್ದೂರವರ ಜನನ : ಶಕ 1756 ವಿಜಯ ಸಂ.

ಪತ್ನಿಯರು 2, ಪುತ್ರರು 4, ಪುತ್ರಿಯರು 7

ಓರೀಪತ್ನಿ ಕಾಂತಮ್ಮಣ್ಣಿ : ಪುತ್ರ ಚಾಮುಂಡಿರಾಜ ಮತ್ತು ಶ್ರೀಕಂಠರಾಜ

ಪುತ್ರಿ ಬೆಟ್ಟದ ತಾಯಮ್ಮಣ್ಣಿ ಹಾಗೂ ಇತರ 6 ಮಕ್ಕಳು

ದ್ವಿತೀಯ ಪತ್ನಿ ಸುಬ್ಬಮ್ಮಣಿ : ಪುತ್ರ ಯದುದೇವರಾಜ, ಪುತ್ರಿಯರು 2

ಸೇನಾಪತಿ ಚಾಮರಾಜ ಬಹದ್ದೂರವರ ದ್ವಿತೀಯ ಪುತ್ರರಾದ ದೇವರಾಜ ಬಹದ್ದೂರವರು

ಪತ್ನಿಯರು 4, ಪುತ್ರು 2, ಪುತ್ರಿಯರು 2

ಓರೀಪತ್ನಿ ಕೆಂಪನಂಜಮ್ಮಣ್ಣಿ : ಪುತ್ರಿಯರು 2, ಪುತ್ರ 1, ಶಿವರಾಮರಾಜ

ದ್ವಿತೀಯ ಪತ್ನಿ ದ್ಯಾವಾಜಮ್ಮಣ್ಣಿ : ಪುತ್ರ ಚಾಮರಾಜ

ತೃತೀಯ ಪತ್ನಿ ನಂಜಮ್ಮಣ್ಣಿ

ಚತುರ್ಥ ಪತ್ನಿ ಕೃಷ್ಣಾಜಮ್ಮಣ್ಣಿ

ಸೇನಾಪತಿ ಚಾಮರಾಜ ಬಹದ್ದೂರವರ ದ್ವಿತೀಯ ಪತ್ನಿ ಕೆಂಪದೇವಾಜಮ್ಮಣ್ಣಿ,

ಪುತ್ರಿ ಬೆಟ್ಟದಮಮ್ಮಣ್ಣಿ ಗಾಂಧರ್ವ ಪತ್ನಿಯರು : ತೃತೀಯ ಪತ್ನಿ ಪುಟ್ಟಗೌರಮ್ಮಯ್ಯ – ಪುತ್ರ ಕೆಂಪಿನಪುಟ್ಟಸ್ವಾಮಿ ಚಾಮರಾಜಬಹದ್ದೂರವರು. ಜನನ ಶಕ 1757ನೇ ಜಯ ಸಂ. ಇವರಿಗೆ ಪತ್ನಿಯರು 2, ಪುತ್ರಿಯರು 2. ಹಿರೀಪತ್ನಿ ಚಾಮಂಮ್ಮಣ್ಣಿ, ಪುತ್ರಿ ದ್ಯಾವಾಜಂಮಣಿ ದ್ವಿತೀಯ ಪತ್ನಿ ನಂಜಮ್ಮಣ್ಣಿ, ಪುತ್ರಿ ಜಯಮ್ಮಣಿ ಸೇನಾಪತಿ ಚಾಮರಾಜಬಹದ್ದೂರವರ ಚತುರ್ಥ ಪತ್ನಿ : ಕೆಂಪಲಕ್ಷಂಮಯ್ಯ ಪುತ್ರ ಸಂ.ತೊ. ದ್ಯಾವರಾಜ ಬಹದ್ದೂರ್, ಜನನ ಶ. 1757ನೇ ಜಯ ಸಂ.

10. ಪುಟ್ಟರಂಗಮಾಂಬಾ : ಪುತ್ರ ಯುವರಾಜ ನಂಜರಾಜ ಬಹದ್ದೂರವರು

ಜನನ : ಶಕ 1743ನೇ ವಿಕ್ರಮ ಸಂವತ್ಸರ

ಪತ್ನಿಯರು 5, ಪುತ್ರರು 2, ಪುತ್ರಿಯರು 8

ಹಿರೀಪತ್ನಿ ಚೆಲುವಾಜಮ್ಮಣ್ಣಿ, ಪುತ್ರಿ ಕೆಂಪನಂಜಮ್ಮಣ್ಣಿ

ಪುತ್ರರು 2, ಚಾಮರಾಜ ಬಹದ್ದೂರವರು ಮತ್ತು ದೇವಪಾರ್ಥಿವರಾಜ ಬಹದ್ದೂರವರು

ದ್ವಿತೀಯ ಪತ್ನಿ ದೇವೀರಮ್ಮಣ್ಣಿ, ಸಂತಾನವಿಲ್ಲ

ತೃತೀಯ ಪತ್ನಿ ನಂಜಮ್ಮಣ್ಣಿ : ಔರಸಪುತ್ರಿ ಚೆನ್ನಗೌರಾಜಮ್ಮಣ್ಣಿ, ದತ್ತು ಪುತ್ರಿಯರು 2, ದೇವಾಜಮ್ಮಣ್ಣಿ ಮತ್ತು ಕೆಂಪದೇವಾಜಮ್ಮಣ್ಣಿ

ಚತುರ್ಥಪತ್ನಿ ದೇವಾಜಮ್ಮಣ್ಣಿ : ಪುತ್ರಿ ದೇವೀರಮ್ಮಣ್ಣಿ

11. 12ನೇ ಬೊಕ್ಕಸದ ತೊಟ್ಟಿ ಗುರುಸಿದ್ಧಮಾಂಬಾ : ಪುತ್ರಿ ದ್ಯಾವಾಜಂಮಣ್ಣಿ

12. ಚಂದ್ರವಿಲಾಸದ ಬಸವಾಜಾಂಬಾ : ಔರಸ ಪುತ್ರಿಯರು 2

ದೊಡ್ಡ ಪುಟ್ಟಮ್ಮಣ್ಣಿ ಉರುಫ್ ಕೆಂಪದೇವಾಜಮ್ಮಣ್ಣಿ ಪುತ್ರಿಯರು 2, ಕೆಂಪನಂಜಮ್ಮಣ್ಣಿ, ಪುತ್ರಿ 1.

ಪುಟ್ಟತಾಯಮ್ಮಣ್ಣಿ ಉರುಫ್

ಕೆಂಪನಂಜ ಲಿಂಗಾಜಮ್ಮಣ್ಣಿ ವೀರಾಜಮ್ಮಣ್ಣಿ

ದತ್ತು ಪುತ್ರಿಯರು 2. ಚಾಮಮ್ಮಣ್ಣಿ ಮತ್ತು ನಂಜಮ್ಮಣ್ಣಿ

ಚಾಮಮ್ಮಣ್ಣಿಯವರಿಗೆ ಪುತ್ರಿಯರು 3. ವೀರಾಜಮ್ಮಣ್ಣಿ, ಗೌರಮ್ಮಣ್ಣಿ ಉರುಫ್ ಕೆಂಪನಂಜಮ್ಮಣ್ಣಿ ಮತ್ತು ಬಸವರಾಜಮ್ಮಣ್ಣಿ

13. ಮನೋವಿಲಾಸ ಮರಿದೇವಾಂಬಾ, ಸಂತಾನವಿಲ್ಲ

14. ಕಮಾನ್ ತೊಟ್ಟಿ ಸಿದ್ಧಲಿಂಗಮಾಂಬಾ, ಸಂತಾನವಿಲ್ಲ

15. ಕಮಾನ್ ತೊಟ್ಟಿ ಭದ್ರಮಾಂಬಾ, ಪುತ್ರಿ ಚಾಮಂಮಂಣಿ

16. ಕೆಂಪನಂಜಮಾಂಬಾ, ಸಂತಾನವಿಲಲ, 17. ಮರಿನಂಜಮಾಂಬಾ, ಪುತ್ರ ಚಾಮರಾಜ ಅರಸು

17. ದೇವೀರಾಂಬಾ, ಪುತ್ರಿ ಮನೋವಿಲಾಸದ ಚಿಕ್ಕಪುಟ್ಟಮ್ಮಣ್ಣಿ ದತ್ತು ಪುತ್ರರು – 2

(ಚಿಕ್ಕ ನಂಜರಾಜೇ ಅರಸು ಮತ್ತು ಸಿದ್ಧರಾಜೇ ಅರಸು.)

18. ಕಲ್ಯಾಣಾಂಬಾ, ಸಂತಾನವಿಲ್ಲ

19. ಸಮುಖದ ತೊಟ್ಟಿ ಮುದ್ದು ಕೃಷ್ಣಾಜಮಾಂಬಾದೇವಿ, ಸಂತಾನವಿಲ್ಲ

ಮೇಲೆ ತಿಳಿಸಿರುವ ಬಿತ್ತೀ ಚಿತ್ರದ ಮಧ್ಯಭಾಗದಲ್ಲಿ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರ ಭಾವ ಚಿತ್ರವಿದೆ ಎಡಭಾಗದಲ್ಲಿ ತಿಳಿಸಿರುವ ವಿವರ ಹೀಗಿದೆ :

1. ಶ್ರೀಮನ್ಮಹಿಶೂರಪುರದ 2. ರಾಧೀಶ ನಂಜರಾಜಾಭಿದ ಮುಂ 3. ಮಡಿ ಶ್ರೀ ಕೃಷ್ಣರಾಜೇಂದ್ರ ಒಡೆಯರು 4. ಬಹದ್ದೂರವರ ಭಾವ, 5. ಚಿತ್ರ ಎಂದು ತಿಳಿಸಿದೆ.

ಬಿತ್ತೀ ಚಿತ್ರದ ಕೆಳಭಾಗದ ಮಧ್ಯದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರವರ ವ್ಯಕ್ತಿತ್ವವನ್ನು ತಿಳಿಸುವ ವೈಭವಯುತವಾದ ಸುಬ್ಬರಾಯನು ವಿರಚಿಸಿರುವ ಒಂದು ಮಂಗಳಾಷ್ಟಕ ಮಾಲಿಕೆಯಿದೆ.

ಈ ಬಿತ್ತೀ ಚಿತ್ರದ ವಿವರವನ್ನು ಪ್ರಪ್ರಥಮವಾಗಿ ಎಂ.ಎ.ಆರ್. 1938ನೇ ಇಸವಿಯಲ್ಲಿ ವಿವರವಾಗಿ ತಿಳಿಸಿದೆ. ಹಾಗೂ ಇದರ ಭಾಷಾಂತರವನ್ನು ಇಂಗ್ಲಿಷಿನಲ್ಲಿ ತಿಳಿಸಿದೆ. (ಪುಟ 67 ರಿಂದ 71).

ಜಗನ್ಮೋಹನ ಬಂಗಲೆಯ ಮೇಲಂತಸ್ತಿನಲ್ಲಿ ಪೂರ್ವಾಭಿಮುಖವಾಗಿ ಮೈಸೂರು ಸಂಸ್ಥಾನದ ಮಹಾರಾಜರ, ಸಂತಾನಾಂಬುಜವನ್ನು ತಿಳಿಸುವ ಬಿತ್ತೀ ಚಿತ್ರದ ವಿವರವು ಹೀಗಿದೆ:

ಈ ಬಿತ್ತೀ ಚಿತ್ರದ ಮೇಲ್ಭಾಗದಲ್ಲಿನ ವಿವರ ಹೀಗಿದೆ:

1. ಶ್ರೀ ಚಾಮುಂಡಾವಿಷ್ಣು ಶಿವ । ಸರ್ವನಿರತ ಚೇತಸಾಂ । ಶ್ರೀ

2. ಮತ್ಕರ್ನಾಟ ರಾಜ್ಯಶ್ರೀ । ಮಹೀಶೂರ ಮಹೀಭುಜಾಂ । ಚಂದ್ರವಂಶ

3. ಯದು ಕ್ಷ್ಮಾಭೃ । ತ್ಕುರಾಂಬೋಧಿ ಹಿಮತ್ವಿಬಷಾಂ । ವಸುದೇವಾದಿ ಭೂಪಾನಾಂ

4. ಸಂತಾನ ಸರಸೀರುಹೆ । ಜಗನ್ಮೋಹನ ಬಂಗಲ್ಯಾಂ । ಸುಧಾಸೌದ ಸರೋವರೆ । ಅಸಿಧಾರಾಡ್ಯ ಸೇನಾಂಗ ಭಾವ ಚಿತ್ರಂ ವಿರಾಜತೇ ॥

ಮೇಲು ಭಾಗದಲ್ಲಿ ಎಡಭಾಗದಲ್ಲಿ ನಂಜುಂಡೇಶ್ವರನ ಭಾವಚಿತ್ರವೂ, ಮಧ್ಯದಲ್ಲಿ ಚಾಮುಂಡೇಶ್ವರಿಯೂ, ಬಲಭಾಗದಲ್ಲಿ ಶ್ರೀಕೃಷ್ಣನನ್ನೂ ಚಿತ್ರಗಾರನು ಚಿತ್ರಿಸಿದ್ದಾನೆ. ಇದರಿಂದ ನಾವು ಗ್ರಹಿಸಬಹುದಾದ ಅಂಶವೆಂದರೆ, ಮೈಸೂರು ಒಡೆಯರು ಮೊದಲಿಗೆ ಶೈವ ಮತಾವಲಂಬಿಗಳಾಗಿದ್ದರೆಂದೂ, ಚಾಮುಂಡೇಶ್ವರಿಯು ಅವರ ಕುಲದೇವತೆಯು; ರಾಜ ಒಡೆಯನ ಕಾಲದಲ್ಲಿ ಅವರು ಶತ್ರುಗಳನ್ನು ನಿಗ್ರಹಿಸಲು ಹಾಗೂ ರಾಜ್ಯವನ್ನು ವಿಸ್ತಾರ ಮಾಡಲು ವೈಷ್ಣವ ಮತಾವಲಂಬಿಗಳಾದರೆಂದು ತಿಳಿದುಬರುತ್ತದೆ.

ಮೈಸೂರು ಒಡೆಯರು ಯದುವಂಶಜರೆಂದೂ, ಭಾಗವತದಲ್ಲಿ ತಿಳಿಸಿರುವ ವಂಶಾವಳಿಯನ್ನು ಅನುಸರಿಸಿ ಇಲ್ಲಿ ತಿಳಿಸಿದೆ. (ಕ್ರಮಾಂಕ 55 ರಿಂದ 74 ರವರೆವಿಗೆ) ಅಂದರೆ ವಾಸುದೇವನಿಂದ ರಾಜದೇವ ರಾಯನವರೆವಿಗೆ; 75 ರಿಂದ 96ರ ವರೆವಿಗೆ ಆದಿ ಯದುರಾಯನಿಂದ ಮುಮ್ಮಡಿ ಕೃಷ್ಣರಾಜ ಒಡೆಯರ ವರೆವಿಗೆ ಸಂಕ್ಷಿಪ್ತವಾಗಿ ಅವರ ಪತ್ನಿಯರು, ಪುತ್ರರು, ಪುತ್ರಿಯರು, ಜನನ, ಪಟ್ಟಾಭಿಷಿಕ್ತರಾದ ಕಾಲ, ಮತ್ತು ಆಳ್ವಿಕೆ ವರುಷವನ್ನೂ ತಿಳಿಸಿದೆ, ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರ ವಿಚಾರವಾಗಿ ವಿವರವು ಹೀಗಿದೆ:

22ನೆ ಪಟ್ಟ ಶ್ರೀ ಮಹಾವಿಷ್ಣ್ವಾದಿ 96ನೇ ಸಂತಾನ ಯದುವಂಶೋದ್ಭವ ಅದಿಯದುರಾಯಾದಿ 21ನೆ ಮುಮ್ಮಡಿ ಚಾಮರಾಜೇಂದ್ರ ಒಡೆಯರು ಕರ್ತರಿಂ ಮಾಡಲ್ಪಟ್ಟ ಕೋಟಿ ಪಂಚಾಕ್ಷರೀ ಪುರಶ್ಚರಣೆಯಿಂದ ಧರ್ಮಪತ್ನಿ ಕೆಂಪನಂಜಮಾಂಬಾಗರ್ಭ ಸುಧಾಂಬುಧಿಯಲ್ಲಿ ಪುತ್ರರಾಗಿ ಶ್ರೀ ಚಾಮುಂಡಾವರ ಪ್ರಸಾದೋದ್ಭವ ಶ್ರೀಕಂಠೇಶ್ವರ ಪದಾರ್ಚಿತ ಶಿವಪೂಜಾದುರಂಧರ ಶ್ರೀಮತ್ಸಮಸ್ತ ಭೂಮಂಡಲ ಮಂಡನಾಯಮಾನೇತ್ಯಾದ್ಯನೇಕ ಬಿರುದಾಂಕಿತ ನಂಜರಾಜಾಭಿದ ಮುಮ್ಮಡಿ ಶ್ರೀ ಕೃಷ್ಣರಾಜೇಂದ್ರ ಸಾರ್ವಭೌಮ ಒಡೆಯರಾದ ಕರ್ತರು ಶಾಲಿವಾಹನ ಶಕ 1717ನೆ ಆನಂದ್ವಸಂ, ಆಶಾಢ ಬಹುಳ 2 ಸೋಮವಾರ ಶ್ರವಣ ನಕ್ಷತ್ರ, ಕನ್ಯಾಲಗ್ನಾಭಿಜನ್ಮುಹೂರ್ತದಲ್ಲಿ ಅವತರಿಸಿ, 1722ನೇ ಸಿದ್ಧಾರ್ಥಿ ಸಂವತ್ಸರ ಜೇಷ್ಠ ಬಹುಳ 13 ಭಾನುವಾರ, ರೋಹಿಣಿ ತಾರಾಕಲಿತ ಕನ್ಯಾಲಗ್ನದಲ್ಲಿ, ವಿಲಾಯಿತಿ ಕಿಂಗ್‌ಜಾರ್ಜ್‌ಪಾದ ಷಹಾರ ಆಜ್ಞೆಯಿಂದ ಶತ್ರುಸಂಹಾರ ಪೂರ್ವಕ ಪಟ್ಟಾಭಿಷಿಕ್ತರಾಗಿ, ಉಡುಪಿ ಸುಬ್ರಹ್ಮಣ್ಯಾದಿ ದೇವತಾ ದರ್ಶನವಂ ಗೈದು, ಸಮುದ್ರಾದಿ ಅನೇಕ ತೀರ್ಥಸ್ನಾನಂಗಳಿಂ ಪರಿಶುದ್ಧ ಮನಸ್ಕರಾಗಿ ಹಿರಣ್ಯಗರ್ಭ

ತುಲಾಭಾರಾದಿ ದಾನಂಗಳಿಂ ದೇವಾಲಯ ವಾಪೀ ಕೂಪ ತಟಾಕಾಗ್ರಹಾರಾದ್ಯನೇಕ ಧರ್ಮಗಳಂ ಗೈದು ಶ್ರೀ ತತ್ವನಿದ್ಯಾದ್ಯನೇಕ ಗ್ರಂಥಗಳಂ ರಚಿಸಿ.

ಕೆಳಭಾಗದಲ್ಲಿ ನೀಳ ಚೌಕದ ಒಳಭಾಗದಲ್ಲಿ

ಪಟ್ಟಾಭಿಷೇಕಾದಿ 60ನೇ ವರ್ಷ ವೃಧ್ಯಾಭಿಷೇಕವಂಗೈಕೊಂಡು ವಿಲಾಯಿತಿ ಕ್ವೀನ್ ವಿಕ್ಟೋರ್ಯ ಮಹಾರಾಣಿಯಿಂದ ಪ್ರೀತಿ ಪುರಸ್ಕಾರವಾಗಿ ದಯಪಾಲಿಸಿದ ಅವರ ಭಾವಚಿತ್ರ ಪ್ರತಿಮೆಯಿಂದೊಡಗೂಡಿದ ಆಯುಧದಿಂದ ಸನ್ಮಾನಿತರಾಗಿ ಪತ್ನೀರು 20 ಪುತ್ರ, ಪೌತ್ರ, ಪ್ರಪೌತ್ರ, ದೌಹಿತ್ರಾದಿಗಳಿಂ ವಿರಾಜಿಸುತ್ತ ಸುಖ ಸಾಂಬ್ರಾಜ್ಯದಿಂ ಪ್ರಕಾಶಿಸುತ್ತಲಿದ್ದಾರೆ ಹೀಗೆ ಒಟ್ಟು 33 ಸಾಲಿನಲ್ಲಿ ವಿವರವನ್ನು ಅಳವಡಿಸಿದೆ.

ಮುಮ್ಮಡಿ ಕೃಷ್ಣರಾಜ ಒಡೆಯರ ಆಳ್ವಿಕೆಯ ಕಾಲದಲ್ಲಿ 1799ನೇ ಜುಲೈ 22 ರಿಂದ 1842ನೇ ಡಿಸೆಂಬರ್ ವರೆವಿಗೆ ಬ್ರಿಟಿಷರಿಂದ ನೇಮಕವಾಗಿದ್ದ ರೆಸಿಡೆಂಟರುಗಳು:

| | ಹೆಸರು | ಕಾಲ |
|---|---|---|
| 1. | ಕರ್ನಲ್ ಬ್ಯಾರಿ ಕ್ಲೋಸ್ | 1799ನೇ ಜುಲೈ 22 |
| 2. | ಮೇಜರ್ ಜಿ. ವೆಬ್, ಹಂಗಾಮಿ | 1802ನೇ ಮಾರ್ಚಿ 31 |
| 3. | ಸರ್‌ಜಾನ್ ಮಾಲ್ಕಾಂ | 1803ನೇ ಮಾರ್ಚಿ |
| 4. | ಮೇಜರ್ ವಿಲ್ಸ್, ಹಂಗಾಮಿ | 1804ನೇ ಫೆಬ್ರವರಿ |
| 5. | ಸರ್‌ಜಾನ್ ಮಾಲ್ಕ | 1804ನೇ ಡಿಸೆಂಬರ್ |
| 6. | ಮೇಜರ್ ಎಂ. ವಿಲ್ಕ್ಸ್ | 1805ನೇ ಮೇ |
| 7. | ಆನರಬಲ್ ಮೇಜರ್ ಎ.ಹೆಚ್. ಕೋಲ್, ಹಂಗಾಮಿ | 180ನೇ ಅಕ್ಟೋಬರ್ 1 |
| 8. | – " – | 1811ನೇ ಜನವರಿ 20 |
| 9. | ಮೇಜರ್ ಕ್ಯಾಸಮೇಜರ್, ಹಂಗಾಮಿ | 1825ನೇ ಅಕ್ಟೋಬರ್ 18 |
| 10. | – " – | 1827ನೇ ಮಾರ್ಚಿ 23 |
| 11. | ಕರ್ನಲ್ ಕಬ್ಬನ್, ಹಂಗಾಮಿ | 1834ನೇ ಮೇ 30, ಬ್ರಿಟಿಷ್ ಕಮೀಷನರ ಆಳ್ವಿಕೆ |
| 12. | ಕರ್ನಲ್ ಫ್ರೇಜರ್ | 1834ನೇ ಅಕ್ಟೋಬರ್, ಬ್ರಿಟಿಷ್ ಕಮೀಷನರ ಆಳ್ವಿಕೆ |

| | | |
|---|---|---|
| 13. | ಕ್ಯಾಪ್ಟನ್ ಸ್ಟೋಕ್ಸ್<br>– " – | 1836ನೇ ಜನವರಿ 19 ರಿಂದ |
| 14. | – " – | 1842ನೇ ಡಿಸೆಂಬರ್ ವರೆಗೆ |
| 15. | – " – | 1843–1881ರವರೆವಿಗೆ |

ನಂಜರಾಜಾಭಿದ ಮುಮ್ಮಡಿ ಶ್ರೀ ಕೃಷ್ಣರಾಜ ಮಹೀಪಾಲರು ತಮ್ಮ ಜೀವಿತ ಕಾಲದಲ್ಲಿ ಪ್ರಜೆಗಳಿಗೆ ಒಳ್ಳೆಯ ವಿದ್ಯಾಭ್ಯಾಸವನ್ನು ಕೊಡಿಸಿ, ಅವರನ್ನು ಒಳ್ಳೆಯ ವಿದ್ಯಾವಂತರನ್ನಾಗಿಯೂ ಹಾಗೂ ಒಳ್ಳೆಯ ಸತ್ಪ್ರಜೆಗಳನ್ನಾಗಿಯೂ ಮಾಡಲು ಅವರು ತೋರಿಸಿದ ಆಸಕ್ತಿ ಹಾಗೂ ನೀಡಿದ ಆಶ್ರಯ ಗಮನಾರ್ಹವಾದುದು.

ಅಂದಿನ ರೆಸಿಡೆಂಟರಾಗಿದ್ದ ಫ್ರೇಸರ್ ಅವರ ಸಲಹೆಯ ಮೇರೆಗೆ 1833ರಲ್ಲಿ ಪ್ರಪ್ರಥಮವಾಗಿ ಒಂದು ಇಂಗ್ಲಿಷ್ ಶಾಲೆಯನ್ನು ಸ್ಥಾಪಿಸಿದರು. ಈ ಶಾಲೆಯ ಆಡಳಿತ ಮತ್ತು ಮೇಲ್ವಿಚಾರಣೆ ಮಹಾರಾಜರವರ ಖಾಸಾ ವೆಚ್ಚದಿಂದ ನಡೆಯುತ್ತಿತ್ತು. 1851ರಲ್ಲಿ ಬೆಂಗಳೂರು ನಗರದಲ್ಲಿ ವೆಸ್ಲಿ ಇಂಗ್ಲಿಷ್ ಶಾಲೆಯು ಸ್ಥಾಪಿತವಾಯಿತು. ಇದರ ಆಡಳಿತ ಹಾಗೂ ಸುವ್ಯವಸ್ಥೆಗೆ ಸರ್ಕಾರದಿಂದ ಪ್ರತಿ ತಿಂಗಳೂ 800 ರೂಪಾಯಿಗಳು ಕೊಡಲ್ಪಡುತ್ತಿತ್ತು. ಈ ಮೂಲಕ ಅವರು ಸರ್ಕಾರಿ ಹಾಗೂ ಮಿಷನರಿ ಬಾಂಧವ್ಯವನ್ನು ಹೆಚ್ಚಿಸಿ ಶಿಕ್ಷಣದ ವಿಚಾರದಲ್ಲಿ ಭಾವೈಕ್ಯವನ್ನು ಉಂಟುಮಾಡಿದರು. ಇದರಿಂದಾಗಿ ಇಂಗ್ಲಿಷ್ ಮಿಷನರಿಗಳು ಮೈಸೂರು ರಾಜ್ಯದ ಇತರ ಊರುಗಳಲ್ಲಿ ಶಾಲಾ ಸ್ಥಾಪನೆಯನ್ನು ಮಾಡುವಂತಾಯಿತು. ಮೈಸೂರು ರಾಜ್ಯದಲ್ಲಿ ವಿದ್ಯಾಭ್ಯಾಸ ಇಲಾಖಾ ಸ್ಥಾಪನೆಯಾಗಿದ್ದು 1857ನೇ ಇಸವಿ ಮೇ ಮಾಹೆಯಲ್ಲಿ. ಬೆಂಗಳೂರಿನಲ್ಲಿ ಪ್ರಪ್ರಥಮವಾಗಿ ಸರ್ಕಾರಿ ಪ್ರೌಢಶಾಲೆ 1858ರಲ್ಲಿ ಸ್ಥಾಪಿತವಾಯಿತು. ಈ ಶಾಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಗಳ ಜೊತೆಗೆ ಇಂಗ್ಲಿಷ್ ಶಿಕ್ಷಣವು ವ್ಯವಸ್ಥೆಯಾಯಿತು.

ಮೈಸೂರಿನಲ್ಲಿ ಸ್ಥಾಪಿತವಾದ ಸರ್ಕಾರಿ ವೆಚ್ಚದ ಇಂಗ್ಲಿಷ್ ಶಾಲೆಗೆ

1835ರಲ್ಲಿ ಶ್ರೀಮಾನ್ ಸೌತ್‌ರವರು ಪ್ರಾಂಶುಪಾಲರಾಗಿದ್ದರು.

1835ರಲ್ಲಿ " ಶ್ರೀಮಾನ್ ಮಿಲ್ಲರ್ ರವರು ಪ್ರಾಂಶುಪಾಲರಾಗಿದ್ದರು

1838ರಲ್ಲಿ ಶ್ರೀಮಾನ್ ಕ್ಯಾಸೈನ್ ರವರು ಪ್ರಾಂಶುಪಾಲರಾಗಿದ್ದರು.

1840ರಲ್ಲಿ ಶಾಲೆಯ ಆಡಳಿತವನ್ನು ವೆಸ್ಲಿ ಮಿಷನ್ನಿಗೆ ವರ್ಗಾಯಿಸಲಾಯಿತು.

ಈ ಶಾಲೆಗೆ ಅಧ್ಯಕ್ಷರಾಗಿ ಪ್ರಪ್ರಥಮವಾಗಿ ಶ್ರೀಮಾನ್ ವ್ಯಾನಿಗನ್‌ರವರು, ನಂತರ ಶ್ರೀಮಾನ್ ಹಾರ್ಡಿ ಮತ್ತು ಹೋಲ್ಸ್ ರವರು ನೇಮಕವಾಗಿದ್ದರು.

1862ರಲ್ಲಿ ಶ್ರೀಮಾನ್ ಡನ್ನಿಂಗ್ ರವರು ಪ್ರಾಂಶುಪಾಲರಾಗಿದ್ದರು.

1864ರಲ್ಲಿ ಹೊಸ ಕಟ್ಟಡದ ನಿರ್ಮಾಣಕ್ಕೆ ಸರ್ಕಾರದ ಅಂಗೀಕಾರವಾಯಿತು.

1866ರಲ್ಲಿ ಕಟ್ಟಡದ ಪ್ರವೇಶ ಮಹೋತ್ಸವು ಜರುಗಿತು. ಈ ಶಾಲೆಯಲ್ಲಿ ದೇಶಭಾಷೆಯನ್ನು ಕಲಿಸಲು ಮುಮ್ಮಡಿಯವರು ಸಲಹೆ ನೀಡಿರುತ್ತಾರೆ.

ಮುಮ್ಮಡಿಯವರು ಸಂಸ್ಕೃತ ವಿದ್ಯಾಭ್ಯಾಸಕ್ಕೆ ತೋರಿಸಿದ ಆಸಕ್ತಿ ಹಾಗೂ ನೀಡಿದ ಆಶ್ರಯಗಳು ಬಹು ಶ್ಲಾಘನೀಯವಾದುದು. ಮೈಸೂರಿನಲ್ಲಿ ಮಹಾರಾಜ ಸಂಸ್ಕೃತ ಪಾಠಶಾಲೆಯು ಸ್ಥಾಪಿತವಾಗಿ ಅದು ಮುಂದೆ ಬೃಹದಾಕಾರವಾಗಿ ಬೆಳೆದು ಕಾಲೇಜು ಆಗಿ ಅಲ್ಲಿಂದ ಇಲ್ಲಿಯ ತನಕ ಸಹಸ್ರಾರು ವಿದ್ವಾಂಸರನ್ನು ಸೃಷ್ಟಿ ಮಾಡಿದೆ.

ಅಚ್ಚು ಕಾರ್ಖಾನೆ 1841–42ರಲ್ಲಿ ಬೆಂಗಳೂರು ನಗರದಲ್ಲಿ ಸ್ಥಾಪಿತವಾಯಿತು.

ಮುಮ್ಮಡಿ ಕೃಷ್ಣರಾಜ ಮಹೀಪಾಲರು ತಮ್ಮ ಆಳ್ವಿಕೆಯ ಕಾಲದಲ್ಲಿ ಮೈಸೂರು ರಾಜಧಾನಿಯಲ್ಲಿ ಜನೋಪಕಾರಾರ್ಥವಾಗಿ ಇಂಗ್ಲಿಷ್ ಪದ್ಧತಿಗೆ ಅನುಸಾರವಾದ ಒಂದು ವೈದ್ಯ ಶಾಲೆಯನ್ನು ನಿರ್ಮಿಸಿದ್ದರು. ಮಹಾರಾಜರವರ ದರ್ಬಾರ್ ಸಜ್ಜನ್‌ರವರು ಇದರ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದರು. 1833ನೇ ಇಸವಿಯಲ್ಲಿ ಬೆಂಗಳೂರು ಕೋಟೆಯಲ್ಲಿ ಕಮೀಷನ್‌ರವರ ಕಛೇರಿಯಲ್ಲಿಯೂ, ಮಾರನೇ ವರ್ಷ ಬೆಂಗಳೂರು ಲಷ್ಕರಿನಲ್ಲಿಯೂ ಸರ್ಕಾರದಿಂದ ಔಷಧ ಶಾಲೆಗಳು ಸ್ಥಾಪಿತವಾಗಿದ್ದವು. ಅನಂತರ ಕ್ರಮವಾಗಿ ಇತರ ಡಿವಿಜನ್ ಸೂಪರಿಂಟೆಂಡೆಂಟ್‌ರವರ ಕಸಬಾಗಳಲ್ಲಿ ಇಂಗ್ಲಿಷ್ ಪದ್ಧತಿಯ ಪ್ರಕಾರ ರೋಗಗಳಿಗೆ ಚಿಕಿತ್ಸೆ ಮಾಡತಕ್ಕ ಮೆಡಿಕಲ್ ಆಫೀಸರುಗಳು ನೇಮಕವಾದರು 1845ನೇ ಇಸವಿಯಲ್ಲಿ ಬೆಂಗಳೂರು ಪೇಟೆಯಲ್ಲಿ ಕುಷ್ಠರೋಗದವರಿಗೆ ಒಂದು ಚಿಕಿತ್ಸಾ ಸ್ಥಾನವೂ 1850ನೇ ಇಸವಿಯಲ್ಲಿ ಹುಚ್ಚರಿಗೊಂದು ಚಿಕಿತ್ಸಾ ಶಾಲೆಯೂ ಏರ್ಪಾಡಾಗಿತ್ತು.

ಮೇಜರ್ ಎಲ್ ಬೌರಿಂಗ್ ರವರ ಕಾಲದಲ್ಲಿ ಇಂಗ್ಲಿಷ್ ರಾಜ್ಯದ ಪದ್ಧತಿಗಳಿಗನುಸಾರವಾಗಿ ಕೆಲವು ಮಾರ್ಪಾಟುಗಳನ್ನು ಮಾಡಿದರು. ಸಂಸ್ಥಾನದಲ್ಲಿ ನಾಲ್ಕು ತುಕಡಿಗಳಿಗೆ ಬದಲಾಗಿ ಎಂಟು ಡಿಸ್ಟ್ರಿಕ್ಟ್‌ಗಳು ಏರ್ಪಟ್ಟು ಇವು ಮೂರು ಡಿವಿಜನ್‌ಗಳಿಗೆ ವಳಿತವಾದವು. ಪ್ರತಿ ಡಿಸ್ಟ್ರಿಕ್ಟಿಗೂ ಒಬ್ಬೊಬ್ಬರೂ ಡೆಪ್ಯೂಟಿ ಸೂಪರಿಂಟೆಂಡೆಂಟ್‌ರೂ ಪ್ರತಿ ಡಿವಿಜನ್ನಿಗೂ ಒಬ್ಬೊಬ್ಬರೂ ಸೂಪರಿಂಟೆಂಡ್‌ರನ್ನು ನೇಮಕ ಮಾಡಿದ್ದರು. ಇವರುಗಳಿಗೂ ಮತ್ತು ಡಿಸ್ಟ್ರಿಕ್ಟ್‌ಗಳಿಗೆ ಒಳಪಟ್ಟ ತಾಲ್ಲೋಕು ಅಮುಲ್ದಾರರಿಗೂ ರೆವಿನ್ಯೂ ಕೆಲಸದೊಂದಿಗೆ ಸಿವಿಲ್ ಮತ್ತು ರೆವಿನ್ಯೂ

ಮೊಕದ್ದಮೆಗಳನ್ನು ತೀರ್ಮಾನಿಸಲು ಅಧಿಕಾರವನ್ನು ಕೊಟ್ಟಿದ್ದರು.

ಮುಮ್ಮಡಿಯವರ ಆಳ್ವಿಕೆಯ ಕಾಲದಲ್ಲಿ 1866ರಲ್ಲಿ ಇನಾಂ ಕಮೀಷನ್ ಸ್ಥಾಪಿತವಾಗಿ ಅದು 1872ರಲ್ಲಿ ಅದು ಸರ್ಕಾರದಿಂದ ಅಂಗೀಕೃತವಾಯಿತು. ಸಂಸ್ಥಾನದಲ್ಲಿ 32,425 ಗ್ರಾಮಗಳು ಇದ್ದುವು.

| | | |
|---|---|---|
| ಸರ್ಕಾರಿ ಗ್ರಾಮಗಳು | – | 32,099 |
| ಸರ್ವಮಾನ್ಯ ಗ್ರಾಮಗಳು | – | 224 |
| ಜೋಡಿ ಗ್ರಾಮಗಳು | – | 76 |
| ಖಾಯಂಗುತ್ತಾ ಗ್ರಾಮಗಳು | – | 26 |

ಒಟ್ಟು 32,425 ಗ್ರಾಮಗಳು

ಮೈಸೂರು ಒಡೆಯರಲ್ಲಿ ವೈವಾಹಿಕ ಸಂಬಂಧ ಬೆಳೆಸಿದ್ದ ಪಾಳೇಗಾರ್ ಮನೆತನದ ಅರಸುಗಳು ಮೈಸೂರು ಜಿಲ್ಲೆಯಲ್ಲಿ ಯಾವ ಯಾವ ಸ್ಥಳದಲ್ಲಿ ಯದುರಾಯನಿಂದ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರ ಕಾಲದವರೆವಿಗೆ ವಂಶಾವಳಿಯ ಪ್ರಕಾರ ವಾಸಿಸುತ್ತಿದ್ದರು ಎಂಬ ಅಂಶವನ್ನು ಹೀಗೆ ಪಟ್ಟಿ ಮಾಡಬಹುದು.

1. ಹಡಜನ 2. ಬೆಟ್ಟದ ಕೋಟೆ, 3. ಕಳಲೆ ಹುಣಸನಾಳು, 4. ಬಿಳಿಕೆರೆ, 5. ಕೋಟೆಹೆಡತಲೆ ಹೆಮ್ಮರಗಾಲತೊರವಳ್ಳಿ 6. ಸಿಂಧುವಳ್ಳಿ, 7. ಬಾಗಳೀ, 8. ಹಳೇಬೀಡು, 9. ನಿಲಸೋಗ, 10. ಹುರ, 11. ಎಡವನಹಳ್ಳಿ, 12. ಬಿಳುಗುಲಿ, 13. ತಿಪ್ಪೂರು, 14. ಯಳಂದೂರು, 15. ಮೂಗೂರು, 16. ಮೂಡಣಕೋಟೆ, 17. ಮದ್ದೂರು, 18. ನರಸಲ್ಲಿ 19, ಅವಿಕುತಾರ, 20. ಹುಲ್ಲಹಳ್ಳಿ, 21. ಮುಲಗೂಡು, 22. ಅಮುಚವಾಡಿ, 23. ಕಾರ್ಗಳ್ಳಿ, 24. ಕೊತ್ತಾಗಾಲ, 25. ಕಲ್ಲಹಳ್ಳಿ, 26. ಬೇಲೂರು, 27. ಅರೆಪುರ, 28. ಬೀಚನಹಳ್ಳಿ, 29. ತೊಂಡವಾಡಿ, 30. ತುರುವೇಕೆರೆ, 31. ತಗಡೂರು, 32. ಹೆಬ್ಬಲಗುಪ್ಪೆ, 33. ಕಿರಳೀಪುರ, 34. ಇಟ್ಟ, 35. ಪಿರಿಯಾಪಟ್ಟಣ, 36. ಅಜ್ಜೀಪುರ, 37. ಬೆಂಡರವಾಡಿ, 38. ಚೆನ್ನಪಟ್ಟಣ, 39. ಕಿರಗುಂದ, 40. ಮುಳ್ಳೂರು, 41. ಕಾವೇರಿಪುರ, 42. ಮರಶೆ, 43. ಹೆಬ್ಬಾಳ, 44. ಕಿಕ್ಕೇರಿ, 45. ಹಾದನೂರು, 46. ಕುಲಗಾಣ, 47. ತಲಕಾಡು, 48. ಬೆಳ್ಳೂರು, 49. ಹೊಸಕೋಟೆ, 50. ಮಳಲವಾಡಿ.

ಮುಮ್ಮಡಿ ಶ್ರೀ ಕೃಷ್ಣರಾಜ ಮಹೀಪಾಲರ ಆಳ್ವಿಕೆಯ ಕಾಲದಲ್ಲಿ ಬ್ರಿಟಿಷ್ ದಳಪತಿಯಾದ ಜನರಲ್ ಹ್ಯಾರಿಸ್‌ರವರು ದಿವಾನ್ ಪೂರ್ಣಯ್ಯನವರ ಸಲಹೆಯಂತೆ

ಮೈಸೂರು ಅರಮನೆಯ ಕೋಟೆ ಅವರಣದಲ್ಲಿ ಸುಮಾರು 500 ಮನೆಗಳನ್ನು ಅವರವರ ಯೋಗ್ಯತಾನುಸಾರ ಕಟ್ಟಿಕೊಟ್ಟಿದ್ದುದಲ್ಲದೆ ಅವರುಗಳು ಸುಖದಿಂದ ಇರುವಂತೆ ಎಲ್ಲ ಸವಲತ್ತೂಗಳನ್ನೂ ಏರ್ಪಡಿಸಿದ್ದರು. ಮೈಸೂರು ಕೋಟೆಯ ಒಳಗಡೆ ಸುಮಾರು 4000 ಜನರು ವಾಸಿಸುತ್ತಿದ್ದರು.

ಹಿಂದಿನ ಮೈಸೂರು ನಗರವನ್ನು ಮೂರು ಪ್ರದೇಶಗಳನ್ನಾಗಿ ವಿಂಗಡಿಸಬಹುದು. ಅವುಗಳು ಯಾವುವೆಮದರೆ ಕೊಟೆ, ಪೇಟೆ ಮತ್ತು ಅಗ್ರಹಾರ. ಪೂರ್ವಕ್ಕೆ ಕಾರಂಜಿ ಬಂಗಲೆ, ಪಶ್ಚಿಮಕ್ಕೆ ಅಟಾರ ಕಛೇರಿ, ಉತ್ತರದಲ್ಲಿ ಈರನಗೆರೆ, ದಕ್ಷಿಣದಲ್ಲಿ ಈಗ ಇರುವ ಗಂಧದೆಣ್ಣೆಯ ಕಾರ್ಖಾನೆ ಹಾಗೂ ಹತ್ತಿರವಿದ್ದ ಕಾಡು ಬಸವೇಶ್ವರನಗುಡಿ, ಇದು ಅಂದಿನ ನಗರದ ವಿಸ್ತೀರ್ಣ.

ಹಳೇ ಅರಮನೆಯ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ರಸ್ತೆಗಳು ಇದ್ದುವು. ಉತ್ತರದ ರಸ್ತೆಯನ್ನು ಹೂವಿನಂಗಡಿ ಬೀದಿಯೆಂದೂ, ಪೂರ್ವದ ರಸ್ತೆಯನ್ನು ತ್ರಿನಯನೇಶ್ವರ ಬೀದಿಯೆಂದೂ, ತ್ರಿಯನೇಶ್ವರದ ಬೀದಿಯೇ ಬಲಭಾಗದಲ್ಲಿ ಹೂವಿನ ಬೀದಿಯಿಂದ ಪೇಟೆಯ ಬೀದಿಯವರೆಗೆ ಒಂದು ರಸ್ತೆಯಿತ್ತು. ಇನ್ನೊಂದು ಬೀದಿ ಇದೇ ರೀತಿಯಾಗಿ ಪಶ್ಚಿಮ ಪೂರ್ವವಾಗಿ, ಹೂವಿನ ಬೀದಿಯಿಂದ ಅಳಿಯಂದಿರು ದೇವರಾಜ ಅರಸಿನವರ ಮನೆಯವರೆವಿಗೆ ಇದೇ ಮುಖ್ಯ ರಸ್ತೆಯಾದ ಹೂವಿನ ಬೀದಿಯಿಂದ ಪಶ್ಚಿಮಾಭಿಮುಖವಾಗಿ ಮನೋ ವಿಲಾಸದ ಮುಂದಲ ಹಟ್ಟಿ ಅರಸಿನವರ ಮನೆಯಿಂದ ಪಶ್ಚಿಮಾಭಿಮುಖವಾಗಿ ಒಂದು ರಸ್ತೆಯಿದ್ದು, ಅದು ಇಂದಿನ ಪ್ರಸನ್ನ ಕೃಷ್ಣಸ್ವಾಮಿ ದೇವಸ್ಥಾನವನ್ನು ದಾಟಿಕೊಂಡು ಕೋಟೆ ಗೋಡೆಯ ಪಕ್ಕದಲ್ಲಿರುವ ಲಕ್ಷ್ಮೀರಮನಸ್ವಾಮಿ ದೇವಸ್ಥಾನದವರೆವಿಗೂ ಇತ್ತು. ಕೋಟೆಯ ಒಳಗೆ ಎರಡು ಮುಖ್ಯ ದ್ವಾರಗಳಿದ್ದು ಅದು ದಕ್ಷಿಣದಲ್ಲಿ ವರಹಸ್ವಾಮಿ ದೇವಸ್ಥಾನದ ಹತ್ತಿರವೂ, ಇನ್ನೊಂದು ಉತ್ತರದಲ್ಲಿ ಅಳಿಯ ಲಿಂಗರಾಜ ಅರಸಿನವರ ಮನೆಯ ಹತ್ತಿರವೂ ಇದ್ದವು. ಕೋಟೆಗೆ ಮೂರು ದಿಡ್ಡೀ ಬಾಗಿಲುಗಳು ಇದ್ದವು. ಅವು ದಕ್ಷಿಣದಲ್ಲಿ ಪಶ್ಚಿಮದಲ್ಲಿ ಮತ್ತು ಪೂರ್ವದಲ್ಲಿ ಇದ್ದವು.

ಅರಮನೆಯ ಕೋಟೆಯ ಒಳಗಡೆ ಖಜಾನೆ, ಅಂಚೆ ಕಛೇರಿ, ಪೊಲೀಸ್ ಕಛೇರಿ, ಇಂಜಿನ್ ಹೌಸ್ ಇತ್ತು. ಅರಮನೆಯ ಕೋಟೆಯ ಆವರಣದಲ್ಲಿದ್ದ ದೇವಸ್ಥಾನಗಳೆಂದರೆ, ತ್ರಿನಯನೇಶ್ವರ ದೇವಸ್ಥಾನ, ಪ್ರಸನ್ನ ಕೃಷ್ಣಸ್ವಾಮಿ ದೇವಸ್ಥಾನ, ವರಹಾಸ್ವಾಮಿ ದೇವಸ್ಥಾನ, ಗಣೇಶನಗುಡಿ, ಲಕ್ಷ್ಮೀನಾರಾಯಣ ದೇವಸ್ಥಾನ, ಪ್ರಸನ್ನ ವೆಂಕಟರಮಣಸ್ವಾಮಿ ದೇವಸ್ಥಾನ, ಸೋಮೇಶ್ವರನ ಗುಡಿ, ಮಾರಮ್ಮನಗುಡಿ ಇವೇ ಮುಂತಾದವು.

ಮುಮ್ಮಡಿ ಶ್ರೀಕೃಷ್ಣರಾಜ ಮಹೀಪಾಲರು 1868ರಲ್ಲಿ ಸ್ವರ್ಗಸ್ಥರಾದ ಮೇಲೆ 1872 ನವೆಂಬರ್‌ನಲ್ಲಿ ಪ್ರಿನ್ಸ್ ನಂಜರಾಜ ಬಹದ್ದೂರವರಿಗೆ ವರಹಸ್ವಾಮಿ ದೇವಸ್ಥಾನದ ಸಮೀಪದಲ್ಲಿ ಒಂದು ವಿಶಾಲವಾದ ಭವನವನ್ನೂ, ಯುವರಾಜ ದೇವ ಪಾರ್ಥಿವರಾಜ ಬರಹದವರಿಗೆ ಅರಮನೆ ಎದುರುಗಡೆ ರಸ್ತೆಯ ಬಲಭಾಘದಲ್ಲಿ ಒಂದು ವಿಶಲವಾದ ಭವನವನ್ನೂ ಬ್ರಿಟಿಷ್ ಅಧಿಕಾರಿಗಳು ಕಟ್ಟಿಸಿಕೊಟ್ಟಿದ್ದರು. ಯುವರಾಜ ದೇವಪಾರ್ಥಿವರಾಜ ಬರಹದವರ ಮನೆಯ ಬಾಗಿಲನ್ನು ರಾತ್ರಿ ಹತ್ತು ಗಂಟೆಗೆ ಮುಚ್ಚಿ ಮೊಹರ್ ಮಾಡಲಾಗುತ್ತಿತ್ತು. ಈ ಬಾಗಿಲನ್ನು ಬೆಳಿಗ್ಗೆ ಸೂರ್ಯ ಉದಯವಾದ ಮೇಲೆ ತೆಗೆಯಲಾಗುತ್ತಿತ್ತು. ಇದನ್ನು ಹಾಕಿ ತೆಗೆಯಲು ಎಂಟು ಹತ್ತು ಜನ ಸೇವಾ ಜನರು ಬೇಕಾಗುತ್ತಿತ್ತು. ಒಂದು ಆನೆಯು ಸರಾಗವಾಗಿ ಮನೆಯ ಒಳಗಡೆ ಹೋಗುತ್ತಿತ್ತು.

ಸರ್ದಾರ್ ಗೋಪಾಲ್ ಕೃಷ್ಣ ಅರಸಿನವರ ಮನೆ ಕಓಟೆ ಒಳಗೆ ಇರಲಿಲ್ಲ. ಅದು ಜಗನ್‌ಮೋಹನ್ ಬಂಗಲೆಯ ಎಡಪಾರ್ಶ್ವದ ರಸ್ತೆಯ ಪಕ್ಕದಲ್ಲಿ ಉತ್ತರಾಭಿಮುಖವಾಗಿತ್ತು. ಪ್ಯಾಟೆ ಬೀದಿಯಲ್ಲಿ, ಅಂದರೆ ಇಂದಿನ ಅಶೋಕ ರಸ್ತೆಯಲ್ಲಿ ತೋಪಿಖಾನೆ ನಂಜರಾಜ ಅರಸಿನವರ ಮಕ್ಕಲಾದ ಪ್ಯಾಟೇ ಹಟ್ಟಿ ದೇವರಾಜ ಅರಸಿನವರ ಮನೆ ಇತ್ತು.

ಹಿಂದೆ ಅರಮನೆಯ ಅಂಗಳದಲ್ಲಿ ಮೂವತ್ತೆರಡು ಆನೆಗಳನ್ನೂ, 95 ಅಶ್ವಗಳನ್ನೂ, ಹದಿಮೂರು ಒಂಟೆಗಳನ್ನೂ, ಕಟ್ಟಿಹಾಕುತ್ತಿದ್ದರು. ಅಶ್ವಗಳಿಂದ ಎಳೆಯಲ್ಪಡುವ ರಥಗಳು 55 ಇದ್ದು ಅರಮನೆಯನ್ನು ಕಾಯಲು 95 ಜನ ಅಶ್ವದಳದವರಿದ್ದರು. ಮುಮ್ಮಡಿ ಶ್ರೀಕೃಷ್ಣರಾಜ ಒಡೆಯರವರ ಸ್ವಂತ ಉಪಯೋಗಕ್ಕೆ 103 ಅಶ್ವಗಳಿದ್ದವು. ಎತ್ತಿನ ಗಾಡಿಗಳು 150 ಇದ್ದವು. ಅರಮನೆಯ ಕೋಟೆಗೆ ಕಾರಂಜೀ ಕೆರೆಯಿಂದ ನೀರು ಸರಬರಾಜಾಗುತ್ತಿತ್ತು. ರಾಜಬಂಧುಗಳ ಮನೆಯಲ್ಲಿ ಕಂದೀಲುಗಳನ್ನು ಉಪಯೋಗಿಸುತ್ತಿದ್ದರು. ಒಂದೊಂದು ಕಂದೀಲಿನಲ್ಲೂ 200–300 ಮೋಂಬತ್ತಿಗಳನ್ನು ಹಚ್ಚಿಡುವ ವ್ಯವಸ್ಥೆಯಿತ್ತು, ಎಂಜಿನ್ ಹೌಸ್‌ನಲ್ಲಿ ವಿದ್ಯುಚ್ಛಕ್ತಿ ಉತ್ಪಾದನೆಯನ್ನು ಅರಮನೆಗೆ ಮಾತ್ರ ಒದಗಿಸುತ್ತಿದ್ದರು. 1908ರಲ್ಲಿ ಅರಮನೆ ಹಾಗೂ ಕೋಟೆ ಒಳಗಿರುವ ಮನೆಗಳಿಗೆ ವಿದ್ಯುಚ್ಛಕ್ತಿ ದೀಪದ ಏರ್ಪಾಡಾಗಿತ್ತು.

ಅರಮನೆ, ಖಜಾನೆ, ಯುವರಾಜ ದೇವಪಾರ್ಥಿವರಾಜ ಬರಹದವರ ಮನೆ ಹಾಗೂ ಅಳಿಯಂದಿರು ಕೃಷ್ಣೇ ಅರಸಿನವರು ಮನೆ ಈ ನಾಲ್ಕು ಸ್ಥಳಗಳಲ್ಲಿ ಗಂಟೆ ಪಹರವಿತ್ತು. ಇವಲ್ಲದೆ ಕೊಟೆಯ ಹೊರಗಡೆ ಪರಕಾಲ ಸ್ವಾಮಿಗಳ ಮಠ ಅಟಾರ ಕಛೇರಿಗಳಲ್ಲಿ ಗಂಟೆ ಪಹರವಿತ್ತು. ಸಿಪಾಯಿಗಳು ಗಂಟೆಗಂಟೆಗೂ ಗಂಟೆ

ಹಾರಿಸುತ್ತಿದ್ದರು. ಬೆಳಿಗ್ಗೆ 5, ರಾತ್ರಿ 9, ಕೆಲವು ದಿನಗಳ ನಂತರ ಮಧ್ಯಾಹ್ನ 12ಕ್ಕೆ ಗುಂಡು ಹಾರಿಸುತ್ತಿದ್ದರು. ಅರಮನೆ, ಯುವರಾಜ ದೇವಪಾರ್ಥಿವ ರಾಜ ಬಹದರವರ ಮನೆ ಮತ್ತು ಅಳಿಯಂದಿರು ಕರಷ್ಣ ಅರಸಿನವರ ಮನೆಗಳಲ್ಲಿ ಬೆಳಿಗ್ಗೆ ಮಧ್ಯಾಹ್ನ ಮತ್ತು ಸಾಯಂಕಾಲದ ವೇಳೆ ನಗಾರಿನೌಬತ್‌ಗಳು ನಡೆಯುತ್ತಿದ್ದು ಅವುಗಳು ವೇಳಾ ಸೂಚಿಗಳಾಗಿ ಇದ್ದವು.

ಅರಮನೆಗೆ ಸೇರಿದಂತೆ ಮೂರು ಬಿಡದಿಗಳಿದ್ದವು. ಖಾಸ್ ಬಿಡದಿಯಲ್ಲಿ ಮಹಾರಾಜರ ಊಟ, ತಿಂಡಿ, ತೀರ್ಥಗಳು ಸಿದ್ಧವಾಗುತ್ತಿದ್ದವು. ತೊಂಬಾರದ ಬಿಡದಿಯಲ್ಲಿ ಅರಮನೆಯ ಇತರ ನೌಕರರಿಗೂ, ಬಡಬಗ್ಗರಿಗೂ ಊಟದ ವ್ಯವಸ್ಥೆ ಮಾಡಲಾಗಿತ್ತು. ಇವಲ್ಲದೆ, ಬ್ರಾಹ್ಮಣರಿಗಾಗಿಯೇ ಒಂದು ಪ್ರತ್ಯೇಕ ಬಿಡದಿಯಿತ್ತು. ತೊಂಬಾರದ ಬಿಡದಿಯಲ್ಲಿ ಪ್ರತಿದಿನ ಒಂದು ಪಲ್ಲ ರಾಗಿಹಿಟ್ಟನ್ನು ಅಡಿಗೆ ಮಾಡಿ ಸಂಜೆಯ ವೇಳೆ, ಕೋಟೆಯ ಹೊರಗಿನ ಮೈದಾನದಲ್ಲಿ ಭಿಕ್ಷುಕರಿಗೆ ಊಟ ಹಾಕುತ್ತಿದ್ದರು. ಇದು ಚಾಮರಾಜ ಒಡೆಯರ ಕಾಲದಲ್ಲಿಯೂ ಮುಂದುವರೆಯಿತು.

ಅಂದಿನ ಸರ್ದಾರರುಗಳಿಗೆ ಜಹಗೀರುಗಳಿದ್ದು ಅವುಗಳಿಂದ ಸಾವಿರಾರು ರೂಪಾಯಿಗಳ ವರಮಾನವಿತ್ತು. ಇದಲ್ಲದೆ ತೋಟ ಗದ್ದೆಗಳೂ ಇದ್ದವು. ಇದಕ್ಕೂ ಮಿಗಿಲಾಗಿ ಅರಮನೆಯಿಂದ ಎಲ್ಲ ಸವಲತ್ತುಗಳನ್ನೂ ಒದಗಿಸಲಾಗಿತ್ತು. ಅರಸು ಮಕ್ಕಳು ಯಾರೂ ವಿದ್ಯೆಗೆ ಅಷ್ಟು ಗಮನ ಕೊಡುತ್ತಿರಲಿಲ್ಲ, ಕಾಲ ಕಳೆಯಲು ಪಗಡೆ, ಚದುರಂಗ, ಇಸ್ಪೀಟು ಆಡುವುದಕ್ಕೆಂದೇ ನಾಲ್ಕಾರು ಮಂದಿಯನ್ನು ಸಂಬಳಕ್ಕಿಟ್ಟುಕೊಂಡಿದ್ದರು. ಕಾಲವು ಸುಭಿಕ್ಷವಾಗಿತ್ತು. ಇಂದಿನ ಗಡಿಬಿಡಿ ಹಿಂದೆ ಖಂಡಿತವಾಗಿಯೂ ಇರಲಿಲ್ಲ. ವಾತಾವರಣವು ಪ್ರಶಾಂತವಾಗಿತ್ತು ಎಂಬುದರಲ್ಲಿ ಸಂದೇಹವಿಲ್ಲ.

ಮುಮ್ಮಡಿ ಶ್ರೀ ಕೃಷ್ಣರಾಜ ಮಹೀಪಾಲರು ತಮ್ಮ ಆಳ್ವಿಕೆಯ ಕಾಲದಲ್ಲಿ ಇಮ್ಮಡಿ ಕೃಷ್ಣರಾಜ ಒಡೆಯರವರ ಕಾಲದಿಂದ ತಮ್ಮ ಕಾಲದವರೆವಿಗೆ ಅರಮನೆಯ ನಾನಾ ಇಲಾಖೆಗಳಲ್ಲಿ ಸೇವೆ ಮಾಡಿರುವ ಅರಸುಗಳೂ, ಮುಖ್ಯವಾದ ಅಧಿಕಾರಿಗಳೂ ಹಾಗೂ ಕಲಾವಿದರು, ವಿದ್ವಾಂಸರು, ಪುರೋಹಿತವರ್ಗದವರು, ಋತ್ವಿಕರು ಹಾಗೂ ಇತರ ವ್ಯಕ್ತಿಗಳ ಭಾವಚಿತ್ರವನ್ನು ಚಿತ್ರಗಾರರಿಂದ ರೇಖಾಚಿತ್ರದ ರೂಪದಲ್ಲಿ ಚಿತ್ರಿಸಿ ಅವುಗಳನ್ನು ಒಂದು ದಾಖಲೆ ಪುಸ್ತಕದಲ್ಲಿ ಅಳವಡಿಸಿ ಅದನ್ನು ಮೈಸೂರಿನ ಜಗನ್ಮೋಹನ್ ಪ್ಯಾಲೇಸಿನಲ್ಲಿ ಇಟ್ಟಿದ್ದರು. ಅದು ಈಗಲೂ ಜಗನ್ಮೋಹನ ಬಂಗಲೆಯಲ್ಲಿ ಇದೆ. ಈ ಪೈಕಿ ಕೆಲವು ವ್ಯಕ್ತಿಗಳ ಹೆಸರನ್ನು ಇಲ್ಲಿ ನಮೂದಿಸಲಾಗಿದೆ.

ಮುಮ್ಮಡಿ ಶ್ರೀ ಕೃಷ್ಣರಾಜರು ಕಾಲದಲ್ಲಿ ಉತ್ತರ ದೇಶದಿಂದ

ಜ್ಯೋತಿಷ್ಯರೊಬ್ಬರು ಮೈಸೂರಿಗೆ ಬಂದು ನೆಲೆಸಿದ್ದರು. ಅವರ ಹೆಸರು ಏನೆಂಬುದು ಯಾರಿಗೂ ತಿಳಿಯದು. ಆದರೆ ಎಲ್ಲರೂ ಮಹಾ ಪುರುಷರೆಂದೇ ಸಂಬೋಧಿಸುತ್ತಿದ್ದರು. ಜ್ಯೋತಿಷ್ಯದಲ್ಲಿ ಅವರಿಗೆ ಅಸಾಧಾರಣ ಪಾಂಡಿತ್ಯವಿದ್ದುದನ್ನು ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರು ತಿಳಿದು ಆ ಪಂಡಿತರ ಜ್ಞಾನದ ಆಳವನ್ನು ತಿಳಿಯಲು ಅಪೇಕ್ಷಿಸಿ ತಾವು ಒಬ್ಬ ಬಡವನಂತೆ ಕರೀ ಕಂಬಳಿಯನ್ನು ಹೊದ್ದುಕೊಂಡು ವೇಷ ಬದಲಾಯಿಸಿಕೊಂಡು ಆ ಜ್ಯೋತಿಷ್ಯದವಲ್ಲಿ ಹೋಗಿ ಸ್ವಲ್ಪ ಈ ಕೈ ನೋಡಿ ಬುದ್ಧಿ ಎಂದು ತಮ್ಮ ಬಲಗೈಯನ್ನು ತೋರಿಸಿದರೆಂದೂ, ಆ ಪಂಡಿತರು ಅವರ ಹಸ್ತರೇಖೆಗಳನ್ನು ನೋಡಿ, ಇದು ಕಟ್ಟಿಗೆ ಮಾರಿ ಜೀವಿಸುವ ಕೈ ಎಂದರಂತೆ. ಮುಮ್ಮಡಿ ಕೃಷ್ಣರಾಜ ಒಡೆಯರವರು, ಸರಿಯೆ ಎಂದು ಹೇಳಿ ಅರಮನೆಗೆ ಹಿಂದಿರುಗಿ, ಮಾರನೇ ದಿನ ತಮ್ಮ ಪೋಷಾಕನ್ನು ಹಾಕಿಕೊಂಡು ಸಿಂಹಾಸನದ ಮೇಲೆ ಕುಳಿತು, ಆ ಜ್ಯೋತಿಷ್ಯರಿಗೆ ಅರಮನೆಗೆ ಬರುವಂತೆ ತಿಳಿಸಿದರಂತೆ. ಅವರು ಬಂದಾಗ ಈ ಹಸ್ತವನ್ನು ತಾವು ಸ್ವಲ್ಪ ನೋಡೋಣವಾಗಲಿ ಎಂದು ಅವರ ಅಂಗೈಯನ್ನು ಮುಂದೆ ಮಾಡಿ ತೋರಿಸಿದರು. ಆ ಜ್ಯೋತಿಷ್ಯರು ಮುಮ್ಮಡಿ ಕೃಷ್ಣರಾಜ ಒಡೆಯರವನ್ನು ಕುರಿತು, ಈ ಹಸ್ತವನ್ನು ನೆನ್ನೆಯೇ ನೋಡಿ ಹೇಳಿದ್ದೇನಲ್ಲಾ ಎಂದರಂತೆ, ಇದನ್ನು ಕಂಡು ದೊರೆಗಳ ಪರಿವಾರದವರು, ಆ ಜ್ಯೋತಿಷ್ಯರನ್ನು ಕುರಿತು ಇವರು ಯರೆಂಬುದು ತಮಗೆ ತಿಳಿದಿದೆಯೋ? ಎಂದು ಪ್ರಶ್ನೆ ಮಾಡಿದಕ್ಕೆ ಆ ಜ್ಯೋತಿಷ್ಯರು, ಸ್ವಲ್ಪ ಜೇನು ಮೇಣವನ್ನು ಹಾಗೂ ಒಂದು ಕೆಂಡವನ್ನೂ ತರಿಸಿಕೊಡಿ ಎಂದು ಹೇಳಿ ತರಿಸಿಕೊಂಡು ಮೇಣವನ್ನು ಕೆಂಡದ ಮೇಲೆ ಇಟ್ಟುಕಾಯಿಸಿ ಅದರಿಂದ ಎರಡು ಬಿಲ್ಲೆಗಳನ್ನು ಮಾಡಿ, ಮಹಾಸ್ವಾಮಿಯವರು ಸ್ವಲ್ಪ ಬಾಯಿ ತೆರೆಯಬೇಕು ಎಂದು ಹೇಳಿ, ಮಹಾರಾಜರ ಎರಡು ದವಡೆಯೊಳಗೂ ಆ ಮೇಣದ ಬಿಲ್ಲೆಗಳನ್ನು ಒತ್ತಿ ಹೊರಗೆ ತೆಗೆದು ಒಂದೊಂದರ ಮೇಲೂ ಒಂದೊಂದು ವಿಷ್ಣು ಚಕ್ರದ ಗುರುತಿದ್ದುದನ್ನು ತೋರಿಸಿ, ಪ್ರಭುಗಳು ಪರಾಂಬರಿಸಬೇಕು ಎಂದು ಹೇಳಿ ತಮ್ಮನ್ನು ಸಿಂಹಾಸನಧೀಶ್ವರರನ್ನಾಗಿ ಮಾಡಿರುವುದು ಈ ವಿಷ್ಣು ಚಕ್ರಗಳು, ಹಸ್ತರೇಖೆಯಲ್ಲವೆಂದು ಹೇಳಿ ಎಲ್ಲರನ್ನೂ ಬೆರಗು ಮಾಡಿದರಂತೆ, ಮಹಾರಾಜರು, ಈ ಮಹಾಪುರುಷರ ದರ್ಶನ ಲಾಭದಿಂದ ಪುನೀತನಾದೆ ಎಂದು ಪ್ರಣಾಮ ಮಾಡಿದರಂತೆ.

ಮುಮ್ಮಡಿ ಶ್ರೀ ಕೃಷ್ಣರಾಜ ಮಹೀಪಾಲರ ಆಳ್ವಿಕೆಯ ಕಾಲದಲ್ಲಿ ಕೆಲವು ಕಛೇರಿ ಹಾಗೂ ಇಲಾಖಾಗಳಲ್ಲಿ ನೇಮಕವಾಗಿದ್ದ ಸಿಬ್ಬಂದಿ ವರ್ಗದ ವಿವರಣಾ ಪಟ್ಟಿ

5

| ಅನುಕ್ರಮ ಸಂಖ್ಯೆ | ಕಛೇರಿ : ಇಲಾಖೆಯ | ಒಟ್ಟು ನೇಮಕ ವಾಗಿದ್ದ ನೌಕರರು | ಮಾಹೇಯಾನ ಖರ್ಚಾಗುತ್ತಿದ್ದ ಒಟ್ಟು ವೇತನ | |
|---|---|---|---|---|
| | ಕಂಠೀರಾಯಿ | ಫನಾಮ್ | ಪಗೋಡ | |
| 1 | ಅರಮನೆ | 5169 | 12,304 | 8 |
| 2 | ಬಾರ್ ಕಛೇರಿ | 903 | 1,995 | 1 |
| 3 | ಬಾಡಿಗಾರ್ಡ್ | 695 | 9,489 | 2 |
| 4 | ಜಿಲ್ಲೋ ಕಛೇರಿ | 1,227 | 2,835 | 3 |
| 5 | ಖಿಲ್ಲೇ ಕಛೇರಿ | 1,015 | 1,392 | 8 |
| 6 | ಶಾಗಿರ್ದ್ ಪೇಶ್ ಕಛೇರಿ | 669 | 1,246 | 3 |
| 7 | ಖಜಾನೆ | 441 | 4,813 | 8 |

ಒಟು 10,119 26,074 37 = ಸುಮಾರು 78,000 ರೂಪಾಯಿಗಳು

ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರ್‌ರವರು ಸ್ವರ್ಗಸ್ಥರಾದ ನಂತರ ಅರಮನೆಯ ಮೇಲ್ವಿಚಾರಣೆಗೆ ನೇಮಕವಾಗಿದ್ದ ಮೇಜರ್ ಚಾರ್ಲ್ಸ್ ಎಲಿಯಟ್‌ರವರ ಸಲಹೆಯಂತೆ ಮಾರ್ಪಾಡಾದ ಸಿಬ್ಬಂದಿ ವರ್ಗದ ವಿವರಣಾ ಪಟ್ಟಿ : ಹಿಂದಿನ ಕಛೇರಿ ಮತ್ತು ಇಲಾಖೆಗಳನ್ನು 3 ಕಛೇರಿ, 8 ಇಲಾಖೆಗಳನ್ನಾಗಿ ಪರಿವರ್ತಿಸಿದ್ದಾನೆ.

| ಅನುಕ್ರಮ | ಕಛೇರಿಯ ಹೆಸರು | ಸೇವಾ ಜನರ ಸಂಖ್ಯೆ | ಮಾಹೆಯಾನ ಆಗುತ್ತಿದ್ದ ಖರ್ಚು ರೂ. | ಆಣೆ | ಕಾಸು |
|---|---|---|---|---|---|
| 1 | ಅರಮನೆ ದಪ್ತರ್ ಕಛೇರಿ | 16 | 263 | 0 | 0 |
| 2 | ಖಿಲ್ಲೇ ಕಛೇರಿ | 586 | 4335 | 0 | 0 |
| 3 | ಜಿಲ್ಲೋ ಕಛೇರಿ | 424 | 2326 | 0 | 0 |

ಇಲಾಖೆಗಳ ಹೆಸರು :

| | | | | | |
|---|---|---|---|---|---|
| 1. | ಚಾಮುಂಡಿ ತೋಟ್ಟ | 251 | 2268 | 0 | 0 |
| 2. | ಅವಸರದ ಹೋಬಳಿ | 4040 | 2244 | 0 | 0 |
| 3. | ಸಮುಖದ ಊಳಿಗ – ಖಾಸ್ | | 306 | 1620 | 00 |
| 4. | ಸಮುಖದ ಊಳಿಗ – ಜನಾನ | | 426 | 1475 | 80 |
| 5. | ಗಜಾಶ್ವಗಳ ಕರೋಹಟ್ಟಿ | 132 | 799 | 8 | 0 |
| 6. | ಹಸುವಿನ ಕರೋಹಟ್ಟಿ | 152 | 501 | 0 | 0 |
| 7. | ಮರಾಮತ್ | 206 | 1280 | 8 | 0 |
| 8. | ತೋಟ, ಗದ್ದೆ, ಇಮಾರತ್ | 213 | 1025 | 0 | 0 |

**ಸಾಮಾನ್ಯ ಕಛೇರಿಗಳು :**

ಖಜಾನ, ತೋಷಿಖಾನ, ಅಕೌಂಟ್ಸ್, ಅರಮನೆಗೆ

ಅಗತ್ಯವಾಗಿ ಬೇಕಾಗುವ ವಸ್ತುಗಳು, ಮೋದೀಕಾನೆ

| | | | | |
|---|---|---|---|---|
| | 80 | 1130 | 8 | 0 |
| ಒಟ್ಟು | 3196 | 19268 | 0 | 0 |

ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರ್ ಆಳ್ವಿಕೆಯ ಕಾಲದಲ್ಲಿ ನೇಮಕವಾಗಿದ್ದ ಪಂಡಿತರು ಸಂಗೀತಗಾರರು ವೈದ್ಯರು, ಸಿಪಾಯಿಗಳು, ರಾಜಾವಾಲ್, ಬಾಲೆಯವರು, ಇಂಗ್ಲಿಷ್ ಬ್ಯಾಂಡ್, ಮತ್ತು ಜಟ್ಟಿಗಳು.

| | | 1836 | 1868 | 1868.81 |
|---|---|---|---|---|
| 1. | ಪಂಡಿತರು | 105 | 464 | 125 |
| 2. | ಸಂಗೀತಗಾರರು | 20 | 24 | 4 |
| 3. | ವೈದ್ಯರು | 29 | 86 | 14 |
| 4. | ಸಿಪಾಯಿಗಳು | 1208 | 1494 | 547 |
| 5. | ರಾಜಾವಾರ್ | 214 | 202 | 111 |
| 6. | ಬಾಲೆಯವರು | 500 | 556 | 264 |
| 7. | ಇಂಗ್ಲಿಷ್ ಬ್ಯಾಂಡ್ | 26 | 51 | 30 |
| 8. | ಜಟ್ಟಿಗಳು | – | 112 | 32 |

ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ ಮಲ್ಲಯುದ್ಧದಲ್ಲಿ ಪರಿಣತರಾದ

ಜಟ್ಟಿಗಳು–

ವಸ್ತಾದಿ ವೆಂಕಾಜೆಟ್ಟಿ, ವರದಾಜೆಟ್ಟಿ, ಹನುಮಾಜೆಟ್ಟಿ ಗೋಪಾಲಜೆಟ್ಟಿ, ವಸ್ತಾದಿ ಶಾಮಣ್ಣ ವೆಂಕು, ಗಂಗಾಧರ ಜೆಟ್ಟಿ, ವಸ್ತಾದಿ ಜೇಪುಣ ಭಾ, ಕಾಳಹಸ್ತಿ ಗೋವಿಂದಚೆಟ್ಟಿ, ಗೋವಿಂದಜೆಟ್ಟಿ ಮತ್ತು ಅಪ್ಪಜೆಟ್ಟಿ ಮುಂತಾದವರನ್ನು ನಾವು ಹೆಸರಿಸಬಹುದು.

ಮುಮ್ಮಡಿ ಶ್ರೀ ಕೃಷ್ಣರಾಜ ಮಹೀಪಾಲರ ಆಳ್ವಿಕೆಯ ಕಾಲದಲ್ಲಿ ಇದ್ದ ಗಜಾಶ್ವಗಳು, ಒಂಟೆಗಳು, ರಥಗಳು ಖಾಸಾ ಅಶ್ವಶಾಲಾ ಮತ್ತು ಎತ್ತಿನ ಗಾಡಿಗಳು ಹಾಗೂ ಅವರ ಸ್ವರ್ಗಸ್ಥರಾದ ನಂತರ ಉಳಿಸಿಕೊಂಡ ಗಜಾಶ್ವರಥ ಮುಂತಾದವುಗಳ ವಿವರಣಾ ಪಟ್ಟಿ:

ಮುಮ್ಮಡಿ ಶ್ರೀ ಕೃಷ್ಣರಾಜರ ಕಾಲದಲ್ಲಿ ಮುಮ್ಮಡಿ ಶ್ರೀಕೃಷ್ಣರಾಜರು ಸ್ವರ್ಗಸ್ಥರಾದ ಮೇಲೆ

| 1799–1868 | 1868–1881 |
|---|---|
| ಆನೆಗಳು–32, ಒಂಟೆಗಳು 13 | ಅಶ್ವಗಳು : 44 |
| ಅಶ್ವಗಳು (ಬಾಡಿಗಾರ್ಡ್) 85 | ಗಜಗಳು : 14 |
| ರಥ, ಲಾಯ–ಮತ್ತು ಅಂಚೆ 95 | ಎತ್ತಿನಗಾಡಿಗಳು : 30 ಜೊತೆ |
| ಖಾಸಾ ಅಶ್ವಶಾಲಾ – 103 | ಹಸುಗಳು : 493 |
| ಎತ್ತಿನ ಗಾಡಿಗಳು – 150 | ಕರುಗಳು : 287 |
| ಪಟ್ಟದ ಆನೆ – 1 | ಎಮ್ಮೆಗಳು : 17 |
| ಭಾರಿ ಆನೆಗಳು : 8 | ಎಮ್ಮೆ ಕರುಗಳು : 9 |
| ಸಣ್ಣ ಆನೆಗಳು : 6 | ಗೂಳಿಗಳು : 57 |

ಪಟ್ಟದ ಕುದುರೆಗಳು : 1

ಕುದುರೆಗಾಡಿಗೆ : 4 ಪೋನಿಗಳು

ಕುದುರೆಗಾಡಿಗೆ : 24 ಅಶ್ವಗಳು

ಸವಾರಿ ಪೋನಿಗಳು : 3 ಸವಾರಿ ಕುದುರೆಗಳು : 12

ಎತ್ತಿನಗಾಡಿಗಳು : 60 ಹಸುಗಳು 863

ಮಂಡೆ ಚರ್ರೈ : 1, ಅರಮನೆ ಕಾವಲಿಗೆ : 22 ಸೇವಕರು

ಹುಲ್ಲಿನ ಕಾವಲಿಗೆ : 5 ಸೇವಕರು

ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರ್ ಆಳ್ವಿಕೆಯ ಕಾಲದಲ್ಲಿ ರಾಜಾಶ್ರಯವನ್ನು ಪಡೆದಿದ್ದ ಆಸ್ಥಾನಿಕರನ್ನು ಹೀಗೆ ಪಟ್ಟಿ ಮಾಡಬಹುದು.

ಆಸ್ಥಾನದ ಕವಿಗಳು 26, ಪ್ರಖ್ಯಾತರಾದವರು 10

1. ಮಲೆಯೂರ ದೇವಚಂದ್ರ, ಜೈನಕವಿ, ರಾಜಾವಳಿ ಕಥಾಸಾರ ಪೂಜ್ಯ ಪಾದ ಚರಿತೆ ರಾಮಕಥಾವತಾರ ಇತ್ಯಾದಿ ಗ್ರಂಥಗಳ ಕರ್ತೃ.
2. ಕರೂರು ಶ್ರೀನಿವಾಸಾಚಾರ್ಯ, ಪ್ರಥಮ ಮಹಾ ವಿದ್ವಾಂಸ
3. ಸೋಸಲೆ ಗರಳಪುರಿ ಶಾಸ್ತ್ರಿಗಳು, ಸಂಸ್ಕೃತ ಪಂಡಿತ, ಕೆಲವು ಅಲಂಕಾರ ಗ್ರಂಥಗಳ ಕರ್ತೃ
4. ರಾಜಕವಿ ಅಳಿಯ ಲಿಂಗರಾಜ ಅರಸಿನವರು, ಸೋಸಲೆ ಗರಳಪುರಿ ಶಾಸ್ತ್ರಿಗಳ ಶಿಷ್ಯರು. ಇವರು ರಚಿಸಿರುವ ಗ್ರಂಥಗಳು 50, ಯಕ್ಷಗಾನ, ಶತಕ, ಷಟ್ಪದಿ, ಚಂಪೂ, ರಗಳೆ, ವೈರಾಗ್ಯ ಜಾವಳಿಗಳು, ಹಾಡುಗಳು, ಲಾವಣಿಗಳು, ಹೀಗೆ ಎಲ್ಲಾ ಪ್ರಕಾರಗಳಲ್ಲಿಯೂ ಗ್ರಂಥಗಳನ್ನು ರಚಿಸಿದ್ದಾರೆ. ಹಾಗೂ ನರಪತಿ ಚರಿತೆ ಎಂಬ ಅಲಂಕಾರ ಶಾಸ್ತ್ರ ಗ್ರಂಥವನ್ನೂ ಮತ್ತು ಸುಮಾರು 50 ಸಂಗೀತ ಕೃತಿಗಳನ್ನೂ (ಶೃಂಗಾರ ಲಹರಿ, ನೀಲಾಂಬರಿ ರಾಗ, ರಕ್ಷಿಸಮ್ಮನೂ ಶೂಲೀ ಕಾನಡ ರಾಗ) ಮತ್ತು ಪ್ರಭಾವತಿ ಪರಿಣಯವೆಂಬ ಮಹಾಕಾವ್ಯವನ್ನೂ ರಚಿಸಿದ್ದಾರೆ. ಮುಮ್ಮಡಿ ಕೃಷ್ಣರಾಜ ಒಡೆಯರವರು ಆಶೀರ್ವದಿಸಿ ಕೊಟ್ಟಿರುವ ಬಿರುದುಗಳು : "ಉಭಯ ಕವಿತಾ ವಿಶಾರದ" ಮತ್ತು "ಅಭಿನವ ಭೋಜ". ತಮ್ಮ ಗ್ರಂಥಗಳಲ್ಲಿ ತಮ್ಮನ್ನು ಚತುರ ಸರಸಕವಿ ಕುಲತಿಲಕ ಎಂದು ಶ್ಲಾಘಿಸಿಕೊಂಡಿದ್ದಾರೆ.
5. ಕೆಂಪುನಾರಯಣ, 1823, ಮುದ್ರಾಮಂಜೂಶದ ಕರ್ತೃ. ಆಕರ ವಿಶಾಖದತ್ತದ ಮುಲಾವಲಂಜೂಶ ಸಂಸ್ಕೃತ ನಾಟಕ 5ನೇ ಶತಮಾನ.
6. ದೇವಲಾಪುರ ನಂಜುಂಡಕವಿ, 1841, ಸೌಗಂಧಿಕಾ ಪರಿಣಯದ ಕರ್ತೃ ಸಾಂಗತ್ಯದಲ್ಲಿದೆ.

ಕೃಷ್ಣರಾಜ ಭಕ್ತಿಸಾರ.

7. ತಮ್ಮಯ್ಯ ಕವಿ : 1834, ರಾಜವಂಶ ರತ್ನಪ್ರಭೆಯ ಕರ್ತೃ.
8. ಶಾಂತರಾಜ ಪಂಡಿತ : 1821, ಸಂಸ್ಕೃತ ಪಂಡಿತ, ಸರಸಿಜನ ಚಿಂತಾಮಣಿಯ ಕರ್ತೃ ಹಾಗೂ ಲಕ್ಷ್ಮೀದೇವಿಗೆ ಹುವು ಮುಡಿಸುವ ಹಾಡುಗಳು.
9. ವೇದಾಂತ ರಾಘವಾಚಾರ್ : 1851, ಇವನು ಶಾಲ್ಯದ ಕೃಷ್ಣರಾಜನ

ನಿಜದೀಪಿಕಾ ರತ್ನಕ್ಕೆ ಕನ್ನಡ ಟೀಕೆ ಬರೆದಿದ್ದಾನೆ.

10. ಪೆರಿಯ ಕೃಷ್ಣಮಾಚಾರ್ : ಸಂಸ್ಕೃತ ಪಂಡಿತ ; ಕರಕಾಲ ವಿಜಯ ಚಂಪೂ ಕರ್ತೃ. ಇವನಿಗೆ ಮುಮ್ಮಡಿ ಕೃಷ್ಣರಾಜ ಒಡೆಯರವರು ತುಂಬಿದ ಸಭೆಯಲ್ಲಿ "ಕವಿ ಶರಭ ಗಂಡಭೇರುಂಡ" ಎಂಬ ಬಿರುದನ್ನು ಕೊಟ್ಟಿದ್ದಾರೆ.

11. ರಾಮಶೇಷ ಶಾಸ್ತ್ರಿ, ಆಶು ಕವಿತ್ವದಲ್ಲಿ ನಿಪುಣ,

12. ಚಂದ್ರಕವಿ : ಕೃಷ್ಣಭೂಪಾಲಿಯ ಆಂದ್ರಭಾಷಾ ಲಕ್ಷಣಗ್ರಂಥ.

13. ಕವಿ ವರದಾಚಾರ್ಯ : ಸಂಸ್ಕೃತ ಪಂಡಿತ, ಗುರುರಾಜ ಚಂಪೂ

14. ಸೋಬಾನೆ ರಂಗದಾಸ : 1931, ಕೃಷ್ಣರಾಜ ಡೋಲೋತ್ಸವದ ಕರ್ತೃ. ಕಾವ್ಯ.

15. ಮದ್ದಗಿರಿ ನಂಜಪ್ಪ : 1841 ಕೃಷ್ಣರಾಜ ವಿಲಾಸದ ಕರ್ತೃ.

16. ಸಂಜಯಂ ತಾತಾಚಾರ್ : ಕವಿತೆ, ಸಾಹಿತ್ಯಗಳು ಹಾಗೂ ಕಾವ್ಯಗಳನ್ನು ರಚಿಸಿರುವುದು ಸ್ಪಷ್ಟ, ಆದರೆ ಆತನ ಗ್ರಂಥಗಳು ಉಪಲಬ್ಧವಿಲ್ಲ.

17. ಸುಬ್ರಮಣ್ಯ : 1831, ತಾರಾಶಶಾಂಕ ನಾಟಕದ ಕರ್ತೃ. ಕೆಲವು ಯಕ್ಷಗಾನಗಳನ್ನೂ ಬರೆದಿರುವಂತೆ ಕಾಣುತ್ತದೆ.

18. ಅನವಟ್ಟಿ ಶ್ರೀನಿವಾಸಚಾರ್ಯ. ಅನಿರುದ್ಧ ವಿಜಯವೆಂಬ ಸಂಸ್ಕೃತದ ನಾಟಕದ ಕರ್ತೃ.

19. ವೆಂಕಟರಾಮಾಶಾಸ್ತ್ರಿ : ಶನಿಪ್ರಯೋದಶಿ ವ್ರತ, 1823

20. ರಾಮಕೃಷ್ಣಶಾಸ್ತ್ರಿ, 1818, ಭವನ ಪ್ರದೀಪಿಕೆ, ಸಂಸ್ಕೃತದಿಂದ ಕನ್ನಡಕ್ಕೆ ಅನುವಾದ.

21. ಶ್ರೀನಿವಾಸಕವಿ : 1812, ಕೃಷ್ಣನೃಪ ಜಯೋತ್ಕರ್ಷ

22. ಬಾಲಲೀಲಾ ಮಹಂತ ಶಿವಯೋಗಿ – 1820

23. ಯಾದವ ಕವಿ – 1800

24. ಗುರುಕೃಷ್ಣ – 1830

25. ಸೀತಾರಾಮಸೂರಿ : 1840

26. ಭಾಗವತ ಕೃಷ್ಣಸ್ವಾಮಿ ; ಜ್ಞಾನವಾಸಿಷ್ಠ ಮತ್ತು ಆಧ್ಯಾತ್ಮ ರಾಮಾಯಣಗಳಿಗೆ ಟೀಕೆ ಬರೆದಿದ್ದಾನೆ,

**ನಾನಾ ಶಾಸ್ತ್ರಗಳಲ್ಲಿ ಪಾಂಡಿತ್ಯವಿದ್ದ ಆಸ್ಥಾನಿಕರು**

1. ತ್ರಯಂಬಕ ಶಾಸ್ತ್ರಿ : ಚತುರ್ಶಾಸ್ತ್ರ ಪಂಡಿತ (ವೇದಾಗಮ)
2. ರಾಜೇಶ್ವರ ಶಾಸ್ತ್ರಿ : ಮಂತ್ರಶಾಸ್ತ್ರ ಪ್ರವೀಣ. (ಮಂತ್ರಗಮ)
3. ಕೆಂಗಲೆ ಸುದರ್ಶನಾಚಾರ್ಯ : ಅಲಂಕಾರ ಶಾಸ್ತ್ರಜ್ಞ
4. ಕುಣಿಗಲ್ ರಾಮಾಶಾಸ್ತ್ರಿ : ವೇದಾಂತ
5. ವಿಷ್ಣುಪಾದಾಚಾರ್ಯ : ಜ್ಯೋತಿಷ್ಯ
6. ಕಾಶೀ ತಿಮ್ಮಣ್ಣಾಚಾರ್ಯ : ದ್ವೈತ ಸಿದ್ಧಾಂತ ಪಂಡಿತ
7. ಆನಂದಾಳ್ವಾರರು : ಮತ್ತು ಮಹದೇವಶಾಸ್ತ್ರಿ (ವೀರಶೈವ ಕವಿ) : ಇವರಿಬ್ಬರೂ ವಿಶಿಷ್ಟಾದ್ವೈತ ಸಿದ್ಧಾಂತಿಗಳು.
8. ತಿರುಪತಿ ಬಾಳಾಚಾರ್ಯ : ಮತ್ತು ಇವನ ಮಗ
9. ಶ್ರೀನಿವಾಸಾಚಾರ್ಯ
10. ನಾಮಗಿರಿ ಶಾಮಾಚಾರ್ – ಈ ಮೂವರು ತರ್ಕಶಾಸ್ತ್ರ ಪಂಡಿತರು.
11. ವಿಶ್ವನಾಥಶಾಸ್ತ್ರೀ, ಇವನ ಸಹೋದರ
12. ಕಾಶೀನಾಥಶಾಸ್ತ್ರಿ
13. ನರಸಿಂಹಶಾಸ್ತ್ರಿ
14. ಕಾಶೀ ಶೇಷಶಾಸ್ತ್ರಿ,
15. ವ್ಯಾಸ ಕೃಷ್ಣಾಚಾರ್ಯ – ಈ ಐವರೂ ವೈಯಾಕರಣಿಗಳು.
16. ವೆಂಕಟಸುಬ್ಬಯ್ಯ, ಮತ್ತು
17. ಕುಂಬಕೋಣದ ಶೇಷಾಚಾರ್ಯ
18. ತಿಮ್ಮಣ್ಣಾಶಾಸ್ತ್ರಿ
19. ಬಾಷ್ಯಂ ಅಪ್ಪಾಶಾಸ್ತ್ರೀ
20. ದಾದಾ ಶಾಸ್ತ್ರೀ
21. ಮಧ್ವಾಚಾರ್ಯ ಮತ್ತು
22. ಅಣ್ಣಮಗಾಚಾರ್ಯ
23. ಕೌರ್ಲಿ ಸೀತಾರಾಮಶಾಸ್ತ್ರಿ ಮತ್ತು
24. ಕೆಂಪು ಶಾಸ್ತ್ರಿಗಳು

ಸಾಮಾನ್ಯ ಪಂಡಿತರು; ವ್ಯಾಖ್ಯಾನಕಾರರು, ಭಾಷಾಂತರಕಾರರು, ಜ್ಯೋಯಿಸರು, ಭಾಗವತರು ಇತ್ಯಾದಿ,

ಶಲ್ಲಿಘಟಂ ಶೇಷಾಚಾರ್ಯ, ಲಕ್ಷ್ಮೀಪಂಡಿತ, ಸೂರಿ ಪಂಡಿತ, ಜಿನಚಂದ್ರ ಪಂಡಿತ, ವಿಶ್ವನಾಥ ಪಂಡಿತ, ಗುರುವೆಂಕಟಸುಬ್ಬಾಜೋಯಿಸ, ಗುಂಜಾ ಜೋಯಿಸ, ಕ್ಯಾತನಹಳ್ಳಿ ಸುಬ್ಬಾಜೋಯಿಸ, ವ್ಯಾಸಾಚಾರ್ಯ, ಹೊಸ ಪಂಡಿತಭೀಮರಾಯ, ಭಾಗವತದ ಸುಬ್ಬರಾಯರು, ಕೊಯಂಬತ್ತೂರ್ ಸುಬ್ರಹ್ಮಣ್ಯಾಚಾರ್ಯ, ಮತ್ತು ಸಂತೋಜಿ ಸುಬ್ಬರಾಯ, ಮಂತ್ರಶಾಸ್ತ್ರಜ್ಞ ಧರ್ಮಸ್ಥಳದ ಲಕ್ಷ್ಮೀನಾರಾಯಣಶಾಸ್ತ್ರಿ ಇವರುಗಳನ್ನು ಸ್ಮರಿಸಬಹುದು.

ಸಾಮಾನ್ಯ ಸಂಗೀತ ವಿದ್ವಾಂಸರಾದ ತಂಜಾವೂರು ರವಲ್ ರಂಗಯ್ಯ, ವೆಂಕಣ್ಣಯ್ಯ ಮತ್ತು ಕರಗಿರಿ ರಾಯರನ್ನೂ ನಾವು ಇಲ್ಲಿ ಸ್ಮರಿಸಬಹುದು. ಇನ್ನೂ ಸುಮಾರು 65 ಸಾಮಾನ್ಯ ಪಂಡಿತರ ಪಟ್ಟಿ ಮಾಡಬಹುದು.

ಸಂಗೀತ ವಿದ್ವಾಂಸರುಗಳು : 24.

1. ವೀಣಾ ಸಾಂಬಯ್ಯ, 2. ವೀಣಾ ವೆಂಕಟಸುಬ್ಬಯ್ಯ, 3. ಸದಾಶಿವರಾಯರು, 4. ವೀಣೆ ಅಣ್ಣಯ್ಯ, 5. ಅನಂತಸುಬ್ಬಯ್ಯ ಮತ್ತು 6. ಅಪ್ಪಯ್ಯ ಪ್ರಮುಖರಾದವರು.

ವೈದ್ಯರು ಮತ್ತು ಆಯುರ್ವೇದ ಪಂಡಿತರು–86, ಮುಖ್ಯರಾದವರು–14

ಪೆರಿಯಸ್ವಾಮಿ ತಿರುಮಲಾಚರ್ಯರು ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರಿಗೆ ಸಂಸ್ಕೃತ ಗುರುಗಳಾಗಿದ್ದರು. ಇವರು ಮೈಸೂರು ವಿಶ್ವವಿದ್ಯಾನಿಲಯದ ಮಹಾರಾಜ ಕಾಲೇಜಿನ ವಿಭಾಗದ ಪ್ರಥಮ ಸಂಸ್ಕೃತ ವಿಭಾಗದ ಮುಖ್ಯಸ್ಥರಾಗಿದ್ದರು.

ರಾಜರು ಸ್ವತಃ ವಿದ್ವಾಂಸನಾಗಿ ಕವಿಗಳನ್ನು ಆಸ್ಥಾನದಲ್ಲಿ ನಿಲ್ಲಿಸಿ ಹೇರಳವಾದ ಆಶ್ರಯವನ್ನು ಕೊಟ್ಟು, ಕೃತಿ ರಚನೆಯ ಸ್ವಾತಂತ್ರ್ಯವನ್ನು ಕೊಡಬೇಕು. ಇದರಿಂದ ಲೋಕ ಕಲ್ಯಾಣವಾಗುವುದರಲ್ಲಿ ಸಂಶಯವಿಲ್ಲ ಎಂಬ ಅಂಶವನ್ನು ವಿದ್ವಾಂಸರು ತಿಳಿಸುತ್ತಾರೆ. ಮುಮ್ಮಡಿ ಕೃಷ್ಣರಾಜ ಒಡೆಯರವರು ಈ ಆರ್ಯ ಲೋಕೋಕ್ತಿಯನ್ನು ಚೆನ್ನಾಗಿ ತಿಳಿದು, ಮೇಲೆ ತಿಳಿಸಿರುವ ಕವಿಗಳಿಗೂ ಮತ್ತು ಇತರ ಶಾಸ್ತ್ರಜ್ಞರಿಗೂ ಬಿರುದು ಬಾವಲಿಗಳನ್ನು, ಗ್ರಾಮ ಅಗ್ರಹಾರಗಳನ್ನೂ, ನಿವೇಶನಗಳನ್ನೂ ಹಾಗೂ ಸಂಭಾವನೆಯನ್ನೂ ಕೊಟ್ಟು ವಿಶೇಷವಾಗಿ ಪ್ರೋತ್ಸಾಹಿಸಿ, ಕನ್ನಡ ಹಾಗೂ ಸಂಸ್ಕೃತ ಸಾಹಿತ್ಯವು ಬೆಳಗುವಂತೆ ಮಾಡಿ, ತಾವೇ ಸ್ವತಃ ಕವಿಗಳಾಗಿ 58 ಗ್ರಂಥಗಳನ್ನು

ರಚಿಸಿ, ಸಾಹಿತ್ಯಾಕಾಶದಲ್ಲಿ ವಿರಾಜಿಸಿದ್ದಾರೆ.

ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರಿಗೆ ಒಂದು ಸಾರಿ ಗ್ರಹಗತಿಗಳು ಬಹಳ ಕ್ರೂರವಾಗಿದ್ದುದರಿಂದ ಸುವರ್ಣ ಗೋದಾನ ಮಾಡಬೇಕೆಂದು ತೀರ್ಮಾನ ಮಾಡಿ ದಾನ ಮಾಡುವ ಸಮಯದಲ್ಲಿ ದಾನವನ್ನು ತೆಗೆದುಕೊಳ್ಳಲು ಯಾರೂ ಧೈರ್ಯವಾಗಿ ಮುಂದೆ ಬರಲಿಲ್ಲ. ದಾನವನ್ನು ಯಾರಿಗೆ ಕೊಡಬೇಕು ಎಂದು ಮಹಾರಾಜರು ಯೋಚಿಸುತ್ತಿದ್ದಾಗ ಅವರ ಪರಿವಾರದವರಲ್ಲೊಬ್ಬರು, ಮಹಾಸ್ವಾಮಿ, ಎಡತೊರೆಯಲ್ಲಿ ಸೋಮಯಾಜಿಗಳೆಂಬ ಅಗ್ನಿ ಆರಾಧಕರು ಇದ್ದಾರೆ. ಅವರು ಮಹಾತೇಜಸ್ವಿಗಳು, ಅಹ್ನಿಕ ಪರರು ಹಾಗೂ ಸೂರ್ಯರಾಧಕರು. ಈ ದಾನವನ್ನು ಸ್ವೀಕರಿಸಲು ಅವರನ್ನು ಬಿಟ್ಟರೆ ಬೇರೆ ಯಾರೂ ಯೋಗ್ಯರಲ್ಲ ಎಂದು ತಿಳಿಸಿದರು. ಮುಮ್ಮಡಿ ಕೃಷ್ಣರಾಜ ಒಡೆಯರವರು ಸೋಮಯಾಜಿಗಳಿಗೆ ಅರಮನೆಯಿಂದ ಬೆಳ್ಳಿಯ ಪಲ್ಲಕ್ಕಿಯನ್ನು ಕಳುಹಿಸಿ ಕರಯಿಸಿಕೊಂಡು, ತಾವು ಕೊಡುವ ದಾನವನ್ನು ಪರಿಗ್ರಹಿಸಬೇಕು ಎಂದು ಪ್ರಾರ್ಥಿಸಿಕೊಂಡರಂತೆ. ಆಗ ಸೋಮಯಾಜಿಗಳು ಆಗಬಹುದು ಎಂದು ಹೇಳಿ, ತಮ್ಮ ಎಡ ಹಸ್ತವನ್ನು ಮುಂದು ಮಾಡಿದರಂತೆ.

ಆಗ ಮಹಾರಾಜರ ಪರಿವಾರದವರು, ಏನು ಗರ್ವ ಈ ಬ್ರಾಹ್ಮಣನಿಗೆ ಎಂದು ಗೊಣಗಾಡಲು ಶುರು ಮಾಡಿದರಂತೆ. ಮಹಾರಾಜರಿಗೂ ಕ್ರೋಧವು ಉದ್ಭವಿಸಿ, ಕಣ್ಣು ಕೆಂಪಾಯಿತು. ಆಗ ಸೋಮಯಾಜಿಗಳು ಮಹಾಪ್ರಭು ಬಲಗೈಯಲ್ಲಿ ದಾನ, ಪ್ರತಿಗ್ರಹ ಮಾಡಿದರೆ ತಮಗೆ ಶ್ರೇಯಸ್ಸಲ್ಲ. ಆದ್ದರಿಂದ ಎಡಗೈಯನ್ನು ಒಡ್ಡಿದ್ದೇನೆ. ತಾವು ಅನ್ಯತಾ ಭಾವಿಸಬಾರದು; ಎಂದರು. ಆದರೆ ಪರಿವಾರದವರು ವ್ಯಂಗ್ಯ ಮಾತುಗಳನ್ನಾಡಿದ ಕಾರಣ, ಸೋಮಯಾಜಿಗಳು ತಮ್ಮ ಬಲಗೈಯಲ್ಲೇ ದಾನವನ್ನು ಸ್ವೀಕಾರ ಮಾಡಿದರು.

ಆಗ ಮಹಾರಾಜರಿಗೆ ಬಹಳ ಕುತೂಹಲವುಂಟಾಗಿ ಸೋಮಯಾಜಿಗಳನ್ನು ಕುರಿತು, ತಾವು ಬಲಗೈಯಲ್ಲಿ ದಾನ ತೆಗೆದುಕೊಳ್ಳುವುದಿಲ್ಲ ಎಂದು ಹೇಳಲು ಕಾರಣವೇನು? ಇದರಲ್ಲಿ ರಹಸ್ಯವೇನಾದರೂ ಇದೆಯೇ ಎಂದು ಪ್ರಶ್ನಿಸಿದರು. ಆಗ ಸೋಮಯಾಜಿಗಳು ಪ್ರಭು. ಆಗಬೇಕಾದುದನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲ, ಎಂದು ತಿಳಿಸಿ ಬೆರಣಿಯ ಚೂರನ್ನು ತರಿಸಿಕೊಂಡು ತಮ್ಮ ಬಲಗೈಯ ಮೇಲೆ ಒಂದು ಚೂರು ಬೆರಣಿಯನ್ನು ಪುಡಿ ಮಾಡಿ ಉದುರಿಸಿ ಕೊಂಡರಂತೆ. ಆಗ ಅಗ್ನಿ ಸ್ಫುಟವಾಗಿ ಆ ಬೆರಣಿಯ ಚೂರು ಭಸ್ಮವಾಯಿತು. ಆಗ ದೊರೆಗಳಾದಿಯಾಗಿ ಎಲ್ಲರಿಗೂ ಬಹಳ ಆಶ್ಚರ್ಯವಾಯಿತು.

ಪ್ರಭುಗಳ ಮುಖವು ಬಾಡಿತು. ಜ್ಯೋತಿಷ್ಯದಲ್ಲಿ ಸ್ವಯಂಪಾಂಡಿತ್ಯವಿದ್ದ

ಪ್ರಭುಗಳಿಗೆ ಭವಿಷ್ಯದ ಚಿತ್ರ ಕಣ್ಣುಮುಂದೆ ಸುಳಿದು ಹಾದುಹೋಯಿತು. ಆ ಸಮಯದಲ್ಲಿ ಸೋಮಯಾಜಿಗಳು ಪ್ರಭು ಕ್ಷಮಿಸಬೇಕು, ಎಂದು ಹೇಳಿ ಅರಮನೆಯಿಂದ ನಿರ್ಗಮನ ಮಾಡಿದರು. ವಿಧಿಯು ತನ್ನ ಕೈವಾಡವನ್ನು ಮಾಡಿಯೇ ತೀರಿಸಿತು. 1831ನೇ ಅಕ್ಟೋಬರ್‌ನಲ್ಲಿ ರಾಜ್ಯವು ಬ್ರಿಟೀಷರ ಅಧೀನವಾಗಿ 1831ರಿಂದ 1881ರವರೆವಿಗೆ ಬ್ರಿಟಿಷ್ ಕಮೀಷನರ ಆಳ್ವಿಕೆಗೆ ಒಳಪಟ್ಟಿತು.

ನೀಚೈರ್ಗಾಚ್ಛತ್ಸುಪಂಚ ದಿಶಾಚಕ್ರನೇ ವಿಕ್ರಮೇಣ

ಅರ್ಥಾಥ್, ಕಾಲಚಕ್ರ ಮಹಿಮೆಯಿಂದ ಉನ್ನತಾವಸ್ಥೆಯಲ್ಲಿರುವವನು

ನೀಚಾವಸ್ಥೆಯನ್ನೂ, ನೀಚಾವಸ್ಥೆಯಲ್ಲಿರುವವನು

ಉನ್ನತಾವಸ್ಥೆಯನ್ನು ಪಡೆಯುವನು

ಮುಮ್ಮಡಿ ಕೃಷ್ಣರಾಜರು ರಚಿಸಿರುವ ಗ್ರಂಥಗಳು

ಮೈಸೂರು ಒಡೆಯರ ವಂಶಜರಲ್ಲಿ ನಂಜರಾಜಾಭಿದ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರ ವ್ಯಕ್ತಿತ್ವವು ಯಾರಿಗೂ ಇರಲಿಲ್ಲವೆಂದರೆ ಅತಿಶಯೋಕ್ತಿಯಲ್ಲ. ಇದಕ್ಕೆ ಕಾರಣ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರು ರಾಜಧರ್ಮವನ್ನು ಹಾಗೂ ರಾಜನೀತಿಯನ್ನು ಚೆನ್ನಾಗಿ ಅಧ್ಯಯನ ಮಾಡಿ ಅವುಗಳನ್ನು ಅಕ್ಷರಸಹ ಪರಿಪಾಲಿಸಿದ್ದಾರೆ. ಮೈಸೂರು ಒಡೆಯರ ವಂಶಜರಲ್ಲಿ ಧರ್ಮಶಾಸ್ತ್ರವನ್ನು ಬಲ್ಲವರೆಂದರೆ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರೊಬ್ಬರೆ, ಇವರು ಮಾಡಿರುವ ದಾನ, ಮಹಾದಾನಗಳು, ಸ್ಥಾಪಿಸಿರುವ ಅಗ್ರಹಾರಗಳು ಹಾಗೂ ವಿವಿಧ ಮತ ಧರ್ಮಗಳಿಗೆ ಸ್ಥಾಪಿಸಿರುವ ಮಠಗಳು ಹಾಗೂ ಅವರು ರಚಿಸಿರುವ ಗ್ರಂಥಗಳಿಂದ ಈ ಮಹಾನ್ ವ್ಯಕ್ತಿಯ ವ್ಯಕ್ತಿತ್ವವು ಎಂಥವರಿಗಾದರೂ ಗೋಚರಿಸದೆ ಇರಲಾರದು.

ಮುಮ್ಮಡಿ ಶ್ರೀ ಕೃಷ್ಣರಾಜರ ಧರ್ಮ ಮಾರ್ಗ ಹಾಗೂ ಔದಾರ್ಯ ದಾತೃಕರ್ತೃತ್ವ ಮತ್ತು ವಿದ್ವತ್‌ಪಕ್ಷ ಪಾತದಿಂದ ಅವರ ಆಸ್ಥಾನವು ಪಂಡಿತರಿಂದ ಆವೃತ್ತಗೊಳ್ಳುವಂತಾಯಿತು. ಇವರು ಸ್ವತಃ ಕವಿಗಳಾಗಿದ್ದು 58 ಗ್ರಂಥಗಳನ್ನು ರಚಿಸಿದ್ದಾರೆ ಎಂದು ಶ್ರೀಮಾನ್ ಆರ್. ನರಸಿಂಹಾಚಾರ್ಯರು ತಮ್ಮ ಕರ್ನಾಟಕ ಕವಿಚರಿತ್ರೆಯಲ್ಲಿ ತಿಳಿಸಿದ್ದಾರೆ.

ಈ ಗ್ರಂಥಗಳಲ್ಲಿ ಹಲವನ್ನು ಆಸ್ತಾನ ಪಂಡಿತರಿಗೆ ಸೂಚನೆಯನ್ನು ಕೊಟ್ಟು ಬರೆಸಿರಬಹುದು ಎಂದೂ, ಕೆಲವು ಗ್ರಂಥಗಳ ರಚನಾಕಾಲವನ್ನೂ ಕೂಡ ತಿಳಿಸಿದ್ದಾರೆ. ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರು ತಮ್ಮನ್ನು ಸ್ವಯಂವೃತ ಕವಿತಾವಧೂರತ್ನ, ಉಭಯಕವಿತಾ ಲಕ್ಷಣವಿಕ್ಷಣ ಎಂದು ವಿಶ್ಲೇಷಿಸಿಕೊಂಡಿರುವುದನ್ನು ತಿಳಿಸಿ, ಕೆಲವು ಗ್ರಂಥಗಳ ವಿಷಯವಾಗಿ ಕೆಲವು ಅಂಶಗಳನ್ನು ಕೂಡ ತಿಳಿಸಿರುತ್ತಾರೆ.

ಶ್ರೀಮಾನ್ ಶ್ರೀನಿವಾಸ ಹಾವನೂರರವರು ತಮ್ಮ ಹೊಸಗನ್ನಡದ ಅರುಣೋದಯದಲ್ಲಿ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರ ಜೀವನ ಹಗೂ ವ್ಯಕ್ತಿತ್ವವನ್ನು ತಿಳಿಸುತ್ತಾ ಮುಮ್ಮಡಿಯವರ ಪ್ರಾರಂಭಕಾಲದ ವಿದ್ವಾಂಸರಲ್ಲಿ ಶ್ರೀ ವೈಷ್ಣವ ಮತದ ಕರೂರು ಶ್ರೀನಿವಾಸಾಚಾರ್ಯರು ಪ್ರಮುಖರು. ಅವರ ಶಿಷ್ಯರಾಗಿದ್ದ ತಿರುಮಲೈ ರಂಗಾಚರ್ಯರು ಮುಮ್ಮಡಿಯವರಿಗೆ ಸಂಸ್ಕೃತದ ಅಭ್ಯಾಸ ಮಾಡಿಸಿದ್ದರು. ಚತುಃಶಾಸ್ತ್ರ ಪಂಡಿತರೆನಿಸಿ, ಪೇಶ್ವೆಯವರಿಂದ ಸನ್ಮಾನಿತರಾಗಿದ್ದ ತ್ರ್ಯಂಬಕ ಶಾಸ್ತ್ರಿಗಳನ್ನು ಕೃಷ್ಣರಾಜರು ತಾವಗಿ ಬರಮಾಡಿಕೊಂಡಿದ್ದರು. ಕುಣಿಗಲ್ ರಾಮಾಶಾಸ್ತ್ರಿಗಳು ತ್ರ್ಯಂಬಕ ಶಾಸ್ತ್ರಿಗಳಲ್ಲಿ ವಿದ್ಯೆ ಕಲಿತು ತರ್ಕಶಾಸ್ತ್ರ ಮತ್ತು ವೇದಾಂತಗಳಲ್ಲಿ ವಿಶೇಷ ಪಾಂಡಿತ್ಯವನ್ನು ಸಂಪಾದಿಸಿದ್ದರು. ಕಾಶಿಯಲ್ಲಿ ಅನೇಕ ವರ್ಷ ವ್ಯಾಸಂಗಮಾಡಿ ಬಂದಿದ್ದ ದ್ವೈತ ಸಿದ್ಧಾಂತಿ ತಿಮ್ಮಣ್ಣಾಚಾರ್ಯರು ಅನ್ಯ ವಂಶಸ್ಥರ ವಾಕ್ಯಾರ್ಥ ಕಾಲದಲ್ಲಿ ತ್ರಯಸ್ಥರಾಗಿರುವಷ್ಟು ಗೌರವವನ್ನು ಹೊಂದಿದ್ದರು. ಒಂದೊಂದು ವಿದ್ಯೆಯಲ್ಲಿ ವಿಶೇಷ ಸಾಧನೆಯನ್ನು ಹೊಂದಿದ್ದ ವಿವಿಧ ವಿದ್ವಾಂಸರು ಆಸ್ಥಾನದಲ್ಲಿ ಇದ್ದರು. ವಿಷ್ಣುಪಾದಾಚಾರ್ಯರು ಖಗೋಲ ಜ್ಯೋತಿಷ್ಯಗಳಲ್ಲಿ ಅಪ್ರತಿಮನಾಗಿದ್ದರೆ, ರಾಜೇಶ್ವರಶಾಸ್ತ್ರಿಗಳು ಮಂತ್ರಾಗಮದಲ್ಲಿ ಪ್ರವೀಣರಾಗಿದ್ದರು. ಸೋಸಲೆ ಗರಳಪುರಿಶಾಸ್ತ್ರಿ ಮತ್ತು ಕಾಶೀ ಶೇಷಶಾಸ್ತ್ರಿ ಇವರು ಅನುಕ್ರಮವಾಗಿ ಅಲಂಕಾರ, ವ್ಯಾಕರಣಶಾಸ್ತ್ರಗಳಲ್ಲಿ ವಿಖ್ಯಾರರೆನಿಸಿದ್ದರು. ಮಹದೇವಶಾಸ್ತ್ರಿಯು ಶಕ್ತಿವಿಶಿಷ್ಟಾದ್ವೈತದ ಪಂಡಿತನಾಗಿ ಆಸ್ಥಾನದಲ್ಲಿಯೇ ಇದ್ದನು. ಎಂದು ತಿಳಿಸಿ ಇನ್ನೂ ಹಲವು ವಿದ್ವಾಂಸರುಗಳ ಹೆಸರುಗಳನ್ನು ಹೀಗೆ ತಿಳಿಸಿದ್ದಾರೆ. ಪೆರಿಯ ಕೃಷ್ಣಮಾಚಾರ್ಯ, ಅನವಟ್ಟಿ ಶ್ರೀನಿವಾಸಾಚಾರ್ಯ, ರಾಮಶೇಷ ಶಾಸ್ತ್ರಿ, ಸಜ್ಜಯಂ ತಾತಚಾರ್ಯ, ಕೆಂಪುನಾರಯಣ, ಶ್ರೀನಿವಾಸ ಕವಿ, ತಮ್ಮಯ ಕವಿ, ಮದ್ದಗಿರಿ ನಂಜಪ್ಪ ಮತ್ತು ಅಳಿಯ ಲಿಂಗರಾಜ ಅರಸಿನವರು.

ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರ್‌ರವರು ಪಂಡಿತರೂ, ಕಲಾವಿದರೂ ಇವರುಗಳನ್ನು ಬರಮಾಡಿಕೊಂಡು ವಿದ್ವದ್‌ಗೋಷ್ಠಿ, ಸುಖಸಂಕಥಾವಿನೋದ, ಪುರಾಣವಾಚನ, ಕೀರ್ತನೆ, ಯಕ್ಷಗಾನ, ಇವುಗಳಲ್ಲಿ ತಲ್ಲೀನರಾಗಿರುತ್ತಿದ್ದರು. ಅರಮನೆಯ ಖಾಸಾ ಜನರು, ಅಧಿಕಾರಿಗಳು, ಇವರುಗಳೊಂದಿಗೆ ಚದುರಂಗ, ಗಂಜೀಪು ಮುಂತಾದ ಆಟಗಳಲ್ಲಿ ಭಾಗವಹಿಸುತ್ತಿದ್ದರು. ಇವರು ಪ್ರಪ್ರಥಮವಾಗಿ ಮುದ್ರಾಯಂತ್ರವನ್ನು ಅರಮನೆಯಲ್ಲಿಯೇ ಸ್ಥಾಪಿಸಿ, ಹಲವಾರು ಗ್ರಂಥಗಳನ್ನು ಹೊರತಂದಿದ್ದಾರೆ. ವಿದೇಶಿಯರಿಗಿಂತ ಮುಂಚಿತವಾಗಿಯೇ ಇವರು ಬಣ್ಣದ ಮುದ್ರಣವನ್ನು ಪ್ರಯೋಗಿಸಿದ್ದಾರೆ ಎಂಬುದು ಆಶ್ಚರ್ಯದ ಸಂಗತಿ.

ಮುಮ್ಮಡಿ ಕೃಷ್ಣರಾಜ ಮಹೀಪಾಲರಿಗೆ ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಪಾಂಡಿತ್ಯವಿದ್ದು ಆಗಿನ ರಾಜಕೀಯ ವ್ಯವಹಾರಕ್ಕೆ ಅಗತ್ಯವಿದ್ದ ಹಿಂದೂಸ್ಥಾನಿ ಮತ್ತು ಮರಾಠಿ ಭಾಷೆಗಳು ಹಾಗೂ ಇಂಗ್ಲಿಷ್ ಪತ್ರಿಕೆಗಳನ್ನು ಓದುವುದಕ್ಕೂ ಮತ್ತು ಇನ್ನೊಬ್ಬರು ಮಾತನಾಡುವುದನ್ನು ಅರ್ಥಮಾಡಿಕೊಳ್ಳುವಷ್ಟು ಜ್ಞಾನವಿತ್ತು. ಪರ್ಷಿಯನ್ ಮತ್ತು ತೆಲಗು ಭಾಷೆಗಳನ್ನು ತಕ್ಕಮಟ್ಟಿಗೆ ತಿಳಿದುಕೊಂಡಿದ್ದರು.

ಶ್ರೀಮಾನ್ ಹಾವನೂರರವರು ಮುಮ್ಮಡಿ ಕೃಷ್ಣರಾಜ ಒಡೆಯರವರ ಗ್ರಂಥಗಳ ಬಗ್ಗೆ ವಿಶ್ಲೇಷಣೆಯನ್ನು ಮಾಡಿ ಮುಮ್ಮಡಿಯವರು ಸಾಹಿತ್ಯಕವಾಗಿ, ಸಾಂಸ್ಕೃತಿಕವಾಗಿ ದೂರದರ್ಶಿತ್ವ ಉಳ್ಳವರು. ಇವರ ಜೀವಿತ ಕಾಲದ ಸಾಧನೆ ಅವಿಸ್ಮರಣೀಯವಾದುದು ಎಂದು ಬಣ್ಣಿಸಿದ್ದಾರೆ.

ಮೈಸೂರು ರಾಜವಂಶ ಚರಿತ್ರೆ (ಅ. 8) ಮತ್ತು ರಾಜವಂಶ ರತ್ನಪ್ರಭ. (ಅ. 5,7) ಈ ಎರಡು ಗ್ರಂಥಗಳೂ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರ ಗ್ರಂಥವಲ್ಲವೆಂದೂ ಶ್ರೀಮಾನ್ ಹಾವನೂರರರವರು ತಿಳಿಸಿದ್ದಾರೆ. ರಾಜವಂಶ ರತ್ನಪ್ರಭಾವನ್ನು 1834ರಲ್ಲಿ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯವರ ಆಸ್ಥಾನ ಕವಿಯಾದ ತಮ್ಮಯ್ಯ ಶಾಸ್ತ್ರಿಯೂ ವಿರಚಿಸಿರುವುದು ಸ್ಪಷ್ಟ. ಮೈಸೂರು ಮಹಾರಾಜರ ವಂಶಾವಳಿಯನ್ನು ಅದ್ಯಾವತ್ತಾಗಿ ಬರೆದು ಪ್ರಕಟಿಸಿರುವ ಬಿ. ರಾಮಕೃಷ್ಣರಾಯರು ತಮ್ಮ ಉಪೋದ್ಘಾತದಲ್ಲಿ ಮುಮ್ಮಡಿಯವರೇ ತಮ್ಮ ವಂಶ ಚರಿತ್ರೆಯನ್ನು ಬರೆದಿದ್ದಾರೆಂದು ತಿಳಿಸಿದ್ದಾರೆ. ಈ ಪ್ರತಿಯು ಅರಮನೆಯ ಸರಸ್ವತೀ ಭಂಡಾರದಲ್ಲಿ ಇದ್ದುದನ್ನು ಬಿ. ರಾಮಕೃಷ್ಣರಾಯರು ಶೃತಪಡಿಸಿದಂತಾಯಿತು. ಆದರೆ ಈ ಹಸ್ತಪ್ರತಿಯು ಯಾವ ಕಾರಣದಿಂದ ಮುದ್ರಿತವಾಗಿ ಪ್ರಕಟವಾಗಿಲ್ಲ, ಇದಕ್ಕೆ ಕಾರಣವೇನಿರಬಹುದು. ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರ ಆಳ್ವಿಕೆಯ ಮಧ್ಯಕಾಲದ ಹೊತ್ತಿಗೆ ನಗರದ ಪುಟ್ಟಯ್ಯ ಹಾಗೂ ಶ್ಯಾನುಭೋಗ ವೆಂಕಟರಮಣಯ್ಯ, ಇವರಿಬ್ಬರೂ ಬರೆದ ವಂಶಾವಳಿಗಳ ಪ್ರತಿಗಳು ಈಗಲೂ ಕೆಲವು ಗ್ರಂಥಾಲಯಗಳಲ್ಲಿ ಇರಬಹುದೆಂದು ಊಹಿಸಬಹುದಾಗಿದೆ.

ಡಾ. ಶ್ರೀನಿವಾಸ ಹಾವನುರ ರವರು ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರ ಗ್ರಂಥಗಳ ಕರ್ತೃತ್ವವನ್ನು ಚೆನ್ನಾಗಿ ವಿಶ್ಲೇಷಿಸಿ ನಮಗೆ ಅವರ ಸ್ಪಷ್ಟ ಅಭಿಪ್ರಾಯವನ್ನು ಕೊಟ್ಟಿದ್ದಾರೆ. ಕವಿಚರಿತ್ರೆಕಾರರ ಅಭಿಪ್ರಾಯದಂತೆ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರು ತಮ್ಮ ಆಸ್ಥಾನ ವಿದ್ವಾಂಸರುಗಳಿಗೆ ಸೂಚನೆಗಳನ್ನು ಕೊಟ್ಟು ಕೆಲವು ಗ್ರಂಥಗಳನ್ನು ಬರೆಸಿರುವುದು ನಮಗೆ ಸ್ಪಷ್ಟವಾಗುತ್ತದೆ. ಶ್ರೀಮಾನ್ ಹಾವನೂರ ರವರು ತಮ್ಮ ವಿಶ್ಲೇಷಣೆಯನ್ನು ಮುಂದುವರಿಸುತ್ತಾ, ಕೃತಿ ಸಮೀಕ್ಷೆ ಎಂಬ

ಶೀರ್ಷಿಕೆಯಲ್ಲಿ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರು ಸಂಸ್ಕೃತ ಹಾಗೂ ಕನ್ನಡದಲ್ಲಿ ಅದ್ವಿತೀಯ ಪಾಂಡಿತ್ಯ ಹೊಂದಿದ್ದರೆಂದೂ, ಅವರಿಗೆ ದೈವಭಕ್ತಿ ಹಾಗೂ ಧರ್ಮಶ್ರದ್ಧೆಗಳು ಇದ್ದುವೆಂದೂ, ಅವರ ರಚಿಸಿರುವ ಶ್ರೀತತ್ವ ನಿಧಿಯಿಂದ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರು ಧರ್ಮಶಾಸ್ತ್ರವನ್ನ ಚೆನ್ನಾಗಿ ಅಧ್ಯಯನ ಮಾಡಿ ತಮ್ಮ ನಿಜ ಜೀವನದಲ್ಲಿ ಅದನ್ನು ಕಾರ್ಯರೂಪದಲ್ಲಿ ಮಾಡಿ ತೋರಿಸಿದ್ದಾರೆ ಎಂದು ಶ್ಲಾಘಿಸಿದ್ದಾರೆ.

ಶ್ರೀಮಾನ್ ಆರ್. ನರಸಿಂಹಾಚಾರ್ಯರಂತು ತಮ್ಮ ಕರ್ನಾಟಕ ಕವಿಚರಿತೆಯಲ್ಲಿ ಮುಮ್ಮಡಿ ಶ್ರೀ ಕೃಷ್ಣರಾಜರು ರಚಿಸಿರುವ ಗ್ರಂಥಗಳ ಕಿರುಪರಿಚಯವನ್ನು ನಮಗೆ ಮಾಡಿಕೊಟ್ಟಿದ್ದಾರೆ. ಇಲ್ಲಿ ನಾನು ನನಗೆ ತಿಳಿದ ಮಟ್ಟಿಗೆ ಸಂಗ್ರಹಿಸಿದ ವಿಷಯವನ್ನು ವಿಷದಪಡಿಸಿದ್ದೇನೆ ಎಂದು ತಿಳಿಸಿದ್ದಾರೆ.

1. ಸೌಗಂಧಿಕಾಪರಿಣಯ : ಈ ಗ್ರಂಥವನ್ನು ಮುಮ್ಮಡಿಯವರು ಪದ್ಯರೂಪವಾಗಿಯೂ ಹಾಗೂ ಗದ್ಯರೂಪವಾಗಿಯೂ ರಚಿಸಿದ್ದಾರೆ. ಪದ್ಯಗ್ರಂಥವು ಭಾಮಿನೀ ಷಟ್ಪದಿಯಲ್ಲಿ ಬರೆದಿದೆ. ಇದರಲ್ಲಿ 100 ಸಂಧಿಗಳಿದ್ದು 6040 ಪದ್ಯಗಳನ್ನು ಅಳವಡಿಸಲಾಗಿದೆ. ಗದ್ಯಗ್ರಂಥವು 36 ಆಶ್ವಾಸಗಳಾಗಿ ವಿಭಾಗಿಸಲ್ಪಟ್ಟಿವೆ. ಇದಕ್ಕೆ ಸಂಕ್ಷೇಪ ಸೌಗಂಧಿಕಾ ಪರಿಣಯವೆಂಬ ಹೆಸರೂ ಇರುವಂತೆ ತೋರುತ್ತದೆ. ಪದ್ಯಗ್ರಂಥದ ಆರಂಭದಲ್ಲಿ ಚಾಮುಂಡೇಶ್ವರಿ ಹಾಗೂ ನಂಜುಂಡೇಶ್ವರನನ್ನು ಸ್ತುತಿಸಿದ್ದಾರೆ. ಈ ಕಥೆಯನ್ನೇ ಸಂಗ್ರಹವಾಗಿ ಮುಮ್ಮಡಿಯವರ ಆಜ್ಞಾನುಸಾರ ದೇವಲಾಪುರದ ನಂಜುಂಡನು ಸಾಂಗತ್ಯದಲ್ಲಿ ಬರೆದಿದ್ದಾನೆ.

ಸೌಗಂಧಿಕಾ ಪರಿಣಯವನ್ನು ಮುಮ್ಮಡಿಯವರು ಶಾಲಿವಾಹನ ಶಕ 1764ನೇ ಶುಭಕೃತು ಸಂವತ್ಸರದ ಆಷಾಢ ಶುದ್ಧ 7 ಗುರುವಾರದಲ್ಲಿ ರಚಿಸಿದ್ದರೆ. ಇದರಲ್ಲಿ ಎರಡು ಸಂಪುಟಗಳಿವೆ. ಪೂರ್ವಾರ್ಧವು ಹದಿನೆಂಟು ಅಶ್ವಾಸಗಳಿಂದಲೂ ಉತ್ತರಾರ್ಧವು ಹದಿನೆಂಟು ಅಶ್ವಾಸಗಳಿಂದಲೂ ಕೂಡಿ ಒಟ್ಟು 36 ಅಶ್ವಾಸಗಳಿವೆ. ಇವೆರಡೂ ಸಂಪುಟಗಳಿಂದ ಸುಮಾರು 1600 ಪುಟಗಳಿವೆ.

ಸೌಗಂಧಿಕಾ ಪರಿಣಯದಲ್ಲಿ ಮುಮ್ಮಡಿಯವರ ಕುಲದೇವತೆ ಹಾಗೂ ಕುಲಕ್ರಮಾಗತೇಶ ದೇವತಾವಿಷಯವನ್ನು ಹೀಗೆ ತಿಳಿಸಿದ್ದಾರೆ.

"... ಲೋಕಪಾವನೆಯಾದ, ಎನ್ನ ಕುಲದೇವತೆಯಾದ ಶ್ರೀ ಚಾಮುಂಡೇಶ್ವರೀ ಎಂಬ ಹೆಸರುಳ್ಳ ಮಹಾದೇವಿಯ ಚರಣ ಕಮಲಂಗಳಂ ಭಕ್ತಿಯಿಂದ ಹೃದಯದೊಳಿಟ್ಟು ಸಾಷ್ಟಾಂಗವೆರಗಿ, ಈ ನವೀನ ಕೃತಿಯು ಲೋಕವಿಖ್ಯಾತವಾಗಿ ಅಚಂದ್ರಾರ್ಕವಾಗಿರುವಂತೆ ಪ್ರಾರ್ಥನೆಯಂ ಮಾಡಿ, ಆ ಬಳಿಕ ನಮ್ಮ

ಜಟ್ಟಿಗಳು–

ವಸ್ತಾದಿ ವೆಂಕಾಜೆಟ್ಟಿ, ವರದಾಜೆಟ್ಟಿ, ಹನುಮಾಜೆಟ್ಟಿ ಗೋಪಾಲಜೆಟ್ಟಿ, ವಸ್ತಾದಿ ಶಾಮಣ್ಣ ವೆಂಕು, ಗಂಗಾಧರ ಜೆಟ್ಟಿ, ವಸ್ತಾದಿ ಜೀಪುಣ ಭಾ, ಕಾಳಹಸ್ತಿ ಗೋವಿಂದಚೆಟ್ಟಿ, ಗೋವಿಂದಜೆಟ್ಟಿ ಮತ್ತು ಅಪ್ಪಜೆಟ್ಟಿ ಮುಂತಾದವರನ್ನು ನಾವು ಹೆಸರಿಸಬಹುದು.

ಮುಮ್ಮಡಿ ಶ್ರೀ ಕೃಷ್ಣರಾಜ ಮಹೀಪಾಲರ ಆಳ್ವಿಕೆಯ ಕಾಲದಲ್ಲಿ ಇದ್ದ ಗಜಾಶ್ವಗಳು, ಒಂಟೆಗಳು, ರಥಗಳು ಖಾಸಾ ಅಶ್ವಶಾಲಾ ಮತ್ತು ಎತ್ತಿನ ಗಾಡಿಗಳು ಹಾಗೂ ಅವರ ಸ್ವರ್ಗಸ್ಥರಾದ ನಂತರ ಉಳಿಸಿಕೊಂಡ ಗಜಾಶ್ವರಥ ಮುಂತಾದವುಗಳ ವಿವರಣಾ ಪಟ್ಟಿ:

ಮುಮ್ಮಡಿ ಶ್ರೀ ಕೃಷ್ಣರಾಜರ ಕಾಲದಲ್ಲಿ ಮುಮ್ಮಡಿ ಶ್ರೀಕೃಷ್ಣರಾಜರು ಸ್ವರ್ಗಸ್ಥರಾದ ಮೇಲೆ

| 1799–1868 | 1868–1881 |
|---|---|
| ಆನೆಗಳು–32, ಒಂಟೆಗಳು 13 | ಅಶ್ವಗಳು : 44 |
| ಅಶ್ವಗಳು (ಬಾಡಿಗಾರ್ಡ್) 85 | ಗಜಗಳು : 14 |
| ರಥ, ಲಾಯ–ಮತ್ತು ಅಂಚೆ 95 | ಎತ್ತಿನಗಾಡಿಗಳು : 30 ಜೊತೆ |
| ಖಾಸಾ ಅಶ್ವಶಾಲಾ – 103 | ಹಸುಗಳು : 493 |
| ಎತ್ತಿನ ಗಾಡಿಗಳು – 150 | ಕರುಗಳು : 287 |
| ಪಟ್ಟದ ಆನೆ – 1 | ಎಮ್ಮೆಗಳು : 17 |
| ಭಾರಿ ಆನೆಗಳು : 8 | ಎಮ್ಮೆ ಕರುಗಳು : 9 |
| ಸಣ್ಣ ಆನೆಗಳು : 6 | ಗೂಳಿಗಳು : 57 |

ಪಟ್ಟದ ಕುದುರೆಗಳು : 1

ಕುದುರೆಗಾಡಿಗೆ : 4 ಪೋನಿಗಳು

ಕುದುರೆಗಾಡಿಗೆ : 24 ಅಶ್ವಗಳು

ಸವಾರಿ ಪೋನಿಗಳು : 3 ಸವಾರಿ ಕುದುರೆಗಳು : 12

ಎತ್ತಿನಗಾಡಿಗಳು : 60 ಹಸುಗಳು 863

ಮಂಡೆ ಚರ್ಯೆ : 1, ಅರಮನೆ ಕಾವಲಿಗೆ : 22 ಸೇವಕರು

ಹುಲ್ಲಿನ ಕಾವಲಿಗೆ : 5 ಸೇವಕರು

ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರ್ ಆಳ್ವಿಕೆಯ ಕಾಲದಲ್ಲಿ ರಾಜಾಶ್ರಯವನ್ನು ಪಡೆದಿದ್ದ ಆಸ್ಥಾನಿಕರನ್ನು ಹೀಗೆ ಪಟ್ಟಿ ಮಾಡಬಹುದು.

ಆಸ್ಥಾನದ ಕವಿಗಳು 26, ಪ್ರಖ್ಯಾತರಾದವರು 10

1. ಮಲೆಯೂರ ದೇವಚಂದ್ರ, ಜೈನಕವಿ, ರಾಜಾವಳಿ ಕಥಾಸಾರ ಪೂಜ್ಯ ಪಾದ ಚರಿತೆ ರಾಮಕಥಾವತಾರ ಇತ್ಯಾದಿ ಗ್ರಂಥಗಳ ಕರ್ತೃ.
2. ಕರೂರು ಶ್ರೀನಿವಾಸಾಚಾರ್ಯ, ಪ್ರಥಮ ಮಹಾ ವಿದ್ವಾಂಸ
3. ಸೋಸಲೆ ಗರಳಪುರಿ ಶಾಸ್ತ್ರಿಗಳು, ಸಂಸ್ಕೃತ ಪಂಡಿತ, ಕೆಲವು ಅಲಂಕಾರ ಗ್ರಂಥಗಳ ಕರ್ತೃ
4. ರಾಜಕವಿ ಅಳಿಯ ಲಿಂಗರಾಜ ಅರಸಿನವರು, ಸೋಸಲೆ ಗರಳಪುರಿ ಶಾಸ್ತ್ರಿಗಳ ಶಿಷ್ಯರು. ಇವರು ರಚಿಸಿರುವ ಗ್ರಂಥಗಳು 50, ಯಕ್ಷಗಾನ, ಶತಕ, ಷಟ್ಪದಿ, ಚಂಪೂ, ರಗಳೆ, ವೈರಾಗ್ಯ ಜಾವಳಿಗಳು, ಹಾಡುಗಳು, ಲಾವಣಿಗಳು, ಹೀಗೆ ಎಲ್ಲಾ ಪ್ರಕಾರಗಳಲ್ಲಿಯೂ ಗ್ರಂಥಗಳನ್ನು ರಚಿಸಿದ್ದಾರೆ. ಹಾಗೂ ನರಪತಿ ಚರಿತೆ ಎಂಬ ಅಲಂಕಾರ ಶಾಸ್ತ್ರ ಗ್ರಂಥವನ್ನೂ ಮತ್ತು ಸುಮಾರು 50 ಸಂಗೀತ ಕೃತಿಗಳನ್ನೂ (ಶೃಂಗಾರ ಲಹರಿ, ನೀಲಾಂಬರಿ ರಾಗ, ರಕ್ಷಿಸಮ್ಮನೂ ಶೂಲೀ ಕಾನಡ ರಾಗ) ಮತ್ತು ಪ್ರಭಾವತಿ ಪರಿಣಯವೆಂಬ ಮಹಾಕಾವ್ಯವನ್ನೂ ರಚಿಸಿದ್ದಾರೆ. ಮುಮ್ಮಡಿ ಕೃಷ್ಣರಾಜ ಒಡೆಯರವರು ಆಶೀರ್ವದಿಸಿ ಕೊಟ್ಟಿರುವ ಬಿರುದುಗಳು : "ಉಭಯ ಕವಿತಾ ವಿಶಾರದ" ಮತ್ತು "ಅಭಿನವ ಭೋಜ". ತಮ್ಮ ಗ್ರಂಥಗಳಲ್ಲಿ ತಮ್ಮನ್ನು ಚತುರ ಸರಸಕವಿ ಕುಲತಿಲಕ ಎಂದು ಶ್ಲಾಘಿಸಿಕೊಂಡಿದ್ದಾರೆ.
5. ಕೆಂಪುನಾರಯಣ, 1823, ಮುದ್ರಾಮಂಜೂಶದ ಕರ್ತೃ. ಆಕರ ವಿಶಾಖದತ್ತದ ಮುಲಾವಲಂಜೂಶ ಸಂಸ್ಕೃತ ನಾಟಕ 5ನೇ ಶತಮಾನ.
6. ದೇವಲಾಪುರ ನಂಜುಂಡಕವಿ, 1841, ಸೌಗಂಧಿಕಾ ಪರಿಣಯದ ಕರ್ತೃ ಸಾಂಗತ್ಯದಲ್ಲಿದೆ.

ಕೃಷ್ಣರಾಜ ಭಕ್ತಿಸಾರ.

7. ತಮ್ಮಯ್ಯ ಕವಿ : 1834, ರಾಜವಂಶ ರತ್ನಪ್ರಭೆಯ ಕರ್ತೃ.
8. ಶಾಂತರಾಜ ಪಂಡಿತ : 1821, ಸಂಸ್ಕೃತ ಪಂಡಿತ, ಸರಸಿಜನ ಚಿಂತಾಮಣಿಯ ಕರ್ತೃ ಹಾಗೂ ಲಕ್ಷ್ಮೀದೇವಿಗೆ ಹುವು ಮುಡಿಸುವ ಹಾಡುಗಳು.
9. ವೇದಾಂತ ರಾಘವಾಚಾರ್ : 1851, ಇವನು ಶಾಲ್ಯದ ಕೃಷ್ಣರಾಜನ

ನಿಜದೀಪಿಕಾ ರತ್ನಕ್ಕೆ ಕನ್ನಡ ಟೀಕೆ ಬರೆದಿದ್ದಾನೆ.

10. ಪೆರಿಯ ಕೃಷ್ಣಮಾಚಾರ್ : ಸಂಸ್ಕೃತ ಪಂಡಿತ ; ಕರಕಾಲ ವಿಜಯ ಚಂಪೂ ಕರ್ತೃ. ಇವನಿಗೆ ಮುಮ್ಮಡಿ ಕೃಷ್ಣರಾಜ ಒಡೆಯರವರು ತುಂಬಿದ ಸಭೆಯಲ್ಲಿ "ಕವಿ ಶರಭ ಗಂಡಭೇರುಂಡ" ಎಂಬ ಬಿರುದನ್ನು ಕೊಟ್ಟಿದ್ದಾರೆ.

11. ರಾಮಶೇಷ ಶಾಸ್ತ್ರಿ, ಆಶು ಕವಿತ್ವದಲ್ಲಿ ನಿಪುಣ.

12. ಚಂದ್ರಕವಿ : ಕೃಷ್ಣಭೂಪಾಲಿಯ ಆಂದ್ರಭಾಷಾ ಲಕ್ಷಣಗ್ರಂಥ.

13. ಕವಿ ವರದಾಚಾರ್ಯ : ಸಂಸ್ಕೃತ ಪಂಡಿತ, ಗುರುರಾಜ ಚಂಪೂ

14. ಸೋಬಾನೆ ರಂಗದಾಸ : 1931, ಕೃಷ್ಣರಾಜ ಡೋಲೋತ್ಸವದ ಕರ್ತೃ. ಕಾವ್ಯ.

15. ಮದ್ದಗಿರಿ ನಂಜಪ್ಪ : 1841 ಕೃಷ್ಣರಾಜ ವಿಲಾಸದ ಕರ್ತೃ.

16. ಸಂಜಯಂ ತಾತಾಚಾರ್ : ಕವಿತೆ, ಸಾಹಿತ್ಯಗಳು ಹಾಗೂ ಕಾವ್ಯಗಳನ್ನು ರಚಿಸಿರುವುದು ಸ್ಪಷ್ಟ. ಆದರೆ ಆತನ ಗ್ರಂಥಗಳು ಉಪಲಬ್ಧವಿಲ್ಲ.

17. ಸುಬ್ರಮಣ್ಯ : 1831, ತಾರಾಶಶಾಂಕ ನಾಟಕದ ಕರ್ತೃ. ಕೆಲವು ಯಕ್ಷಗಾನಗಳನ್ನೂ ಬರೆದಿರುವಂತೆ ಕಾಣುತ್ತದೆ.

18. ಅನವಟ್ಟಿ ಶ್ರೀನಿವಾಸಚಾರ್ಯ. ಅನಿರುದ್ಧ ವಿಜಯವೆಂಬ ಸಂಸ್ಕೃತದ ನಾಟಕದ ಕರ್ತೃ.

19. ವೆಂಕಟರಾಮಾಶಾಸ್ತ್ರಿ : ಶನಿಪ್ರಯೋದಶಿ ವ್ರತ, 1823

20. ರಾಮಕೃಷ್ಣಶಾಸ್ತ್ರಿ, 1818, ಭವನ ಪ್ರದೀಪಿಕೆ, ಸಂಸ್ಕೃತದಿಂದ ಕನ್ನಡಕ್ಕೆ ಅನುವಾದ.

21. ಶ್ರೀನಿವಾಸಕವಿ : 1812, ಕೃಷ್ಣನೃಪ ಜಯೋತ್ಕರ್ಷ

22. ಬಾಲಲೀಲಾ ಮಹಂತ ಶಿವಯೋಗಿ – 1820

23. ಯಾದವ ಕವಿ – 1800

24. ಗುರುಕೃಷ್ಣ – 1830

25. ಸೀತಾರಾಮಸೂರಿ : 1840

26. ಭಾಗವತ ಕೃಷ್ಣಸ್ವಾಮಿ ; ಜ್ಞಾನವಾಸಿಷ್ಠ ಮತ್ತು ಆಧ್ಯಾತ್ಮ ರಾಮಾಯಣಗಳಿಗೆ ಟೀಕೆ ಬರೆದಿದ್ದಾನೆ,

**ನಾನಾ ಶಾಸ್ತ್ರಗಳಲ್ಲಿ ಪಾಂಡಿತ್ಯವಿದ್ದ ಆಸ್ಥಾನಿಕರು**

1. ತ್ರಯಂಬಕ ಶಾಸ್ತ್ರಿ : ಚತುರ್ಶಾಸ್ತ್ರ ಪಂಡಿತ (ವೇದಾಗಮ)
2. ರಾಜೇಶ್ವರ ಶಾಸ್ತ್ರಿ : ಮಂತ್ರಶಾಸ್ತ್ರ ಪ್ರವೀಣ. (ಮಂತ್ರಗಮ)
3. ಕೆಂಗಲೆ ಸುದರ್ಶನಾಚಾರ್ಯ : ಅಲಂಕಾರ ಶಾಸ್ತ್ರಜ್ಞ
4. ಕುಣಿಗಲ್ ರಾಮಾಶಾಸ್ತ್ರಿ : ವೇದಾಂತ
5. ವಿಷ್ಣುಪಾದಾಚಾರ್ಯ : ಜ್ಯೋತಿಷ್ಯ
6. ಕಾಶೀ ತಿಮ್ಮಣ್ಣಾಚಾರ್ಯ : ದ್ವೈತ ಸಿದ್ಧಾಂತ ಪಂಡಿತ
7. ಆನಂದಾಳ್ವಾರರು : ಮತ್ತು ಮಹದೇವಶಾಸ್ತ್ರಿ (ವೀರಶೈವ ಕವಿ) : ಇವರಿಬ್ಬರೂ ವಿಶಿಷ್ಟಾದ್ವೈತ ಸಿದ್ಧಾಂತಿಗಳು.
8. ತಿರುಪತಿ ಬಾಳಾಚಾರ್ಯ : ಮತ್ತು ಇವನ ಮಗ
9. ಶ್ರೀನಿವಾಸಾಚಾರ್ಯ
10. ನಾಮಗಿರಿ ಶಾಮಾಚಾರ್ – ಈ ಮೂವರು ತರ್ಕಶಾಸ್ತ್ರ ಪಂಡಿತರು.
11. ವಿಶ್ವನಾಥಶಾಸ್ತ್ರೀ, ಇವನ ಸಹೋದರ
12. ಕಾಶೀನಾಥಶಾಸ್ತ್ರಿ
13. ನರಸಿಂಹಶಾಸ್ತ್ರಿ
14. ಕಾಶೀ ಶೇಷಶಾಸ್ತ್ರಿ,
15. ವ್ಯಾಸ ಕೃಷ್ಣಾಚಾರ್ಯ – ಈ ಐವರೂ ವೈಯಾಕರಣಿಗಳು.
16. ವೆಂಕಟಸುಬ್ಬಯ್ಯ, ಮತ್ತು
17. ಕುಂಬಕೋಣದ ಶೇಷಾಚಾರ್ಯ
18. ತಿಮ್ಮಣ್ಣಾಶಾಸ್ತ್ರಿ
19. ಬಾಷ್ಯಂ ಅಪ್ಪಾಶಾಸ್ತ್ರೀ
20. ದಾದಾ ಶಾಸ್ತ್ರೀ
21. ಮದ್ವಾಚಾರ್ಯ ಮತ್ತು
22. ಅಣ್ಣಾಮಗಾಚಾರ್ಯ
23. ಕೌರ್ಗ್ಲಿ ಸೀತಾರಾಮಶಾಸ್ತ್ರಿ ಮತ್ತು
24. ಕೆಂಪು ಶಾಸ್ತ್ರಿಗಳು

ಸಾಮಾನ್ಯ ಪಂಡಿತರು; ವ್ಯಾಖ್ಯಾನಕಾರರು, ಭಾಷಾಂತರಕಾರರು, ಜ್ಯೋಯಿಸರು, ಭಾಗವತರು ಇತ್ಯಾದಿ,

ತಲ್ಲಿಘಟಂ ಶೇಷಾಚಾರ್ಯ, ಲಕ್ಷ್ಮೀಪಂಡಿತ, ಸೂರಿ ಪಂಡಿತ, ಜಿನಚಂದ್ರ ಪಂಡಿತ, ವಿಶ್ವನಾಥ ಪಂಡಿತ, ಗುರುವೆಂಕಟಸುಬ್ಬಾಜೋಯಿಸ, ಗುಂಜಾ ಜೋಯಿಸ, ಕ್ಯಾತನಹಳ್ಳಿ ಸುಬ್ಬಾಜೋಯಿಸ, ವ್ಯಾಸಾಚಾರ್ಯ, ಹೊಸ ಪಂಡಿತಭೀಮರಾಯ, ಭಾಗವತದ ಸುಬ್ಬರಾಯರು, ಕೊಯಂಬತ್ತೂರ್ ಸುಬ್ರಹ್ಮಣ್ಯಾಚಾರ್ಯ, ಮತ್ತು ಸಂತೋಜಿ ಸುಬ್ಬರಾಯ, ಮಂತ್ರಶಾಸ್ತ್ರಜ್ಞ ಧರ್ಮಸ್ಥಳದ ಲಕ್ಷ್ಮೀನಾರಾಯಣಶಾಸ್ತ್ರಿ ಇವರುಗಳನ್ನು ಸ್ಮರಿಸಬಹುದು.

ಸಾಮಾನ್ಯ ಸಂಗೀತ ವಿದ್ವಾಂಸರಾದ ತಂಜಾವೂರು ರವಲ್ ರಂಗಯ್ಯ, ವೆಂಕಣ್ಣಯ್ಯ ಮತ್ತು ಕರಗಿರಿ ರಾಯರನ್ನೂ ನಾವು ಇಲ್ಲಿ ಸ್ಮರಿಸಬಹುದು. ಇನ್ನೂ ಸುಮಾರು 65 ಸಾಮಾನ್ಯ ಪಂಡಿತರ ಪಟ್ಟಿ ಮಾಡಬಹುದು.

ಸಂಗೀತ ವಿದ್ವಾಂಸರುಗಳು : 24.

1. ವೀಣಾ ಸಾಂಬಯ್ಯ, 2. ವೀಣಾ ವೆಂಕಟಸುಬ್ಬಯ್ಯ, 3. ಸದಾಶಿವರಾಯರು, 4. ವೀಣೆ ಅಣ್ಣಯ್ಯ, 5. ಅನಂತಸುಬ್ಬಯ್ಯ ಮತ್ತು 6. ಅಪ್ಪಯ್ಯ ಪ್ರಮುಖರಾದವರು.

ವೈದ್ಯರು ಮತ್ತು ಆಯುರ್ವೇದ ಪಂಡಿತರು–86, ಮುಖ್ಯರಾದವರು–14

ಪೆರಿಯಸ್ವಾಮಿ ತಿರುಮಲಾಚರ್ಯರು ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರಿಗೆ ಸಂಸ್ಕೃತ ಗುರುಗಳಾಗಿದ್ದರು. ಇವರು ಮೈಸೂರು ವಿಶ್ವವಿದ್ಯಾನಿಲಯದ ಮಹಾರಾಜ ಕಾಲೇಜಿನ ವಿಭಾಗದ ಪ್ರಥಮ ಸಂಸ್ಕೃತ ವಿಭಾಗದ ಮುಖ್ಯಸ್ಥರಾಗಿದ್ದರು.

ರಾಜರು ಸ್ವತಃ ವಿದ್ವಾಂಸನಾಗಿ ಕವಿಗಳನ್ನು ಆಸ್ಥಾನದಲ್ಲಿ ನಿಲ್ಲಿಸಿ ಹೇರಳವಾದ ಆಶ್ರಯವನ್ನು ಕೊಟ್ಟು, ಕೃತಿ ರಚನೆಯ ಸ್ವಾತಂತ್ರ್ಯನ್ನು ಕೊಡಬೇಕು. ಇದರಿಂದ ಲೋಕ ಕಲ್ಯಾಣವಾಗುವುದರಲ್ಲಿ ಸಂಶಯವಿಲ್ಲ ಎಂಬ ಅಂಶವನ್ನು ವಿದ್ವಾಂಸರು ತಿಳಿಸುತ್ತಾರೆ. ಮುಮ್ಮಡಿ ಕೃಷ್ಣರಾಜ ಒಡೆಯರವರು ಈ ಆರ್ಯ ಲೋಕೋಕ್ತಿಯನ್ನು ಚೆನ್ನಾಗಿ ತಿಳಿದು, ಮೇಲೆ ತಿಳಿಸಿರುವ ಕವಿಗಳಿಗೂ ಮತ್ತು ಇತರ ಶಾಸ್ತ್ರಜ್ಞರಿಗೂ ಬಿರುದು ಬಾವಲಿಗಳನ್ನು, ಗ್ರಾಮ ಅಗ್ರಹಾರಗಳನ್ನೂ, ನಿವೇಶನಗಳನ್ನೂ ಹಾಗೂ ಸಂಭಾವನೆಯನ್ನೂ ಕೊಟ್ಟು ವಿಶೇಷವಾಗಿ ಪ್ರೋತ್ಸಾಹಿಸಿ, ಕನ್ನಡ ಹಾಗೂ ಸಂಸ್ಕೃತ ಸಾಹಿತ್ಯವು ಬೆಳಗುವಂತೆ ಮಾಡಿ, ತಾವೇ ಸ್ವತಃ ಕವಿಗಳಾಗಿ 58 ಗ್ರಂಥಗಳನ್ನು

ರಚಿಸಿ, ಸಾಹಿತ್ಯಾಕಾಶದಲ್ಲಿ ವಿರಾಜಿಸಿದ್ದಾರೆ.

ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರಿಗೆ ಒಂದು ಸಾರಿ ಗ್ರಹಗತಿಗಳು ಬಹಳ ಕ್ರೂರವಾಗಿದ್ದುದರಿಂದ ಸುವರ್ಣ ಗೋದಾನ ಮಾಡಬೇಕೆಂದು ತೀರ್ಮಾನ ಮಾಡಿ ದಾನ ಮಾಡುವ ಸಮಯದಲ್ಲಿ ದಾನವನ್ನು ತೆಗೆದುಕೊಳ್ಳಲು ಯಾರೂ ಧೈರ್ಯವಾಗಿ ಮುಂದೆ ಬರಲಿಲ್ಲ. ದಾನವನ್ನು ಯಾರಿಗೆ ಕೊಡಬೇಕು ಎಂದು ಮಹಾರಾಜರು ಯೋಚಿಸುತ್ತಿದ್ದಾಗ ಅವರ ಪರಿವಾರದವರಲ್ಲೊಬ್ಬರು, ಮಹಾಸ್ವಾಮಿ, ಎಡತೊರೆಯಲ್ಲಿ ಸೋಮಯಾಜಿಗಳೆಂಬ ಅಗ್ನಿ ಆರಾಧಕರು ಇದ್ದಾರೆ. ಅವರು ಮಹಾತೇಜಸ್ವಿಗಳು, ಅಹ್ನಿಕ ಪರರು ಹಾಗೂ ಸೂರ್ಯರಾಧಕರು. ಈ ದಾನವನ್ನು ಸ್ವೀಕರಿಸಲು ಅವರನ್ನು ಬಿಟ್ಟರೆ ಬೇರೆ ಯಾರೂ ಯೋಗ್ಯರಲ್ಲ ಎಂದು ತಿಳಿಸಿದರು. ಮುಮ್ಮಡಿ ಕೃಷ್ಣರಾಜ ಒಡೆಯರವರು ಸೋಮಯಾಜಿಗಳಿಗೆ ಅರಮನೆಯಿಂದ ಬೆಳ್ಳಿಯ ಪಲ್ಲಕ್ಕಿಯನ್ನು ಕಳುಹಿಸಿ ಕರಯಿಸಿಕೊಂಡು, ತಾವು ಕೊಡುವ ದಾನವನ್ನು ಪರಿಗ್ರಹಿಸಬೇಕು ಎಂದು ಪ್ರಾರ್ಥಿಸಿಕೊಂಡರಂತೆ. ಆಗ ಸೋಮಯಾಜಿಗಳು ಆಗಬಹುದು ಎಂದು ಹೇಳಿ, ತಮ್ಮ ಎಡ ಹಸ್ತವನ್ನು ಮುಂದು ಮಾಡಿದರಂತೆ.

ಆಗ ಮಹಾರಾಜರ ಪರಿವಾರದವರು, ಏನು ಗರ್ವ ಈ ಬ್ರಾಹ್ಮಣನಿಗೆ ಎಂದು ಗೊಣಗಾಡಲು ಶುರು ಮಾಡಿದರಂತೆ. ಮಹಾರಾಜರಿಗೂ ಕ್ರೋಧವು ಉದ್ಭವಿಸಿ, ಕಣ್ಣು ಕೆಂಪಾಯಿತು. ಆಗ ಸೋಮಯಾಜಿಗಳು ಮಹಾಪ್ರಭು ಬಲಗೈಯಲ್ಲಿ ದಾನ, ಪ್ರತಿಗ್ರಹ ಮಾಡಿದರೆ ತಮಗೆ ಶ್ರೇಯಸ್ಸಲ್ಲ. ಆದ್ದರಿಂದ ಎಡಗೈಯನ್ನು ಒಡ್ಡಿದ್ದೇನೆ. ತಾವು ಅನ್ಯಥಾ ಭಾವಿಸಬಾರದು; ಎಂದರು. ಆದರೆ ಪರಿವಾರದವರು ವ್ಯಂಗ್ಯ ಮಾತುಗಳನ್ನಾಡಿದ ಕಾರಣ, ಸೋಮಯಾಜಿಗಳು ತಮ್ಮ ಬಲಗೈಯಲ್ಲೇ ದಾನವನ್ನು ಸ್ವೀಕಾರ ಮಾಡಿದರು.

ಆಗ ಮಹಾರಾಜರಿಗೆ ಬಹಳ ಕುತೂಹಲವುಂಟಾಗಿ ಸೋಮಯಾಜಿಗಳನ್ನು ಕುರಿತು, ತಾವು ಬಲಗೈಯಲ್ಲಿ ದಾನ ತೆಗೆದುಕೊಳ್ಳುವುದಿಲ್ಲ ಎಂದು ಹೇಳಲು ಕಾರಣವೇನು? ಇದರಲ್ಲಿ ರಹಸ್ಯವೇನಾದರೂ ಇದೆಯೇ ಎಂದು ಪ್ರಶ್ನಿಸಿದರು. ಆಗ ಸೋಮಯಾಜಿಗಳು ಪ್ರಭು. ಆಗಬೇಕಾದುದನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲ, ಎಂದು ತಿಳಿಸಿ ಬೆರಣಿಯ ಚೂರನ್ನು ತರಿಸಿಕೊಂಡು ತಮ್ಮ ಬಲಗೈಯ ಮೇಲೆ ಒಂದು ಚೂರು ಬೆರಣಿಯನ್ನು ಪುಡಿ ಮಾಡಿ ಉದುರಿಸಿ ಕೊಂಡರಂತೆ. ಆಗ ಅಗ್ನಿ ಸ್ಫುಟವಾಗಿ ಆ ಬೆರಣಿಯ ಚೂರು ಭಸ್ಮವಾಯಿತು. ಆಗ ದೊರೆಗಳಾದಿಯಾಗಿ ಎಲ್ಲರಿಗೂ ಬಹಳ ಆಶ್ಚರ್ಯವಾಯಿತು.

ಪ್ರಭುಗಳ ಮುಖವು ಬಾಡಿತು. ಜ್ಯೋತಿಷ್ಯದಲ್ಲಿ ಸ್ವಯಂಪಾಂಡಿತ್ಯವಿದ್ದ

ಪ್ರಭುಗಳಿಗೆ ಭವಿಷ್ಯದ ಚಿತ್ರ ಕಣ್ಣುಮುಂದೆ ಸುಳಿದು ಹಾದುಹೋಯಿತು. ಆ ಸಮಯದಲ್ಲಿ ಸೋಮಯಾಜಿಗಳು ಪ್ರಭು ಕ್ಷಮಿಸಬೇಕು, ಎಂದು ಹೇಳಿ ಅರಮನೆಯಿಂದ ನಿರ್ಗಮನ ಮಾಡಿದರು. ವಿಧಿಯು ತನ್ನ ಕೈವಾಡವನ್ನು ಮಾಡಿಯೇ ತೀರಿಸಿತು. 1831ನೇ ಅಕ್ಟೋಬರ್‌ನಲ್ಲಿ ರಾಜ್ಯವು ಬ್ರಿಟೀಷರ ಅಧೀನವಾಗಿ 1831ರಿಂದ 1881ರವರೆವಿಗೆ ಬ್ರಿಟಿಷ್ ಕಮೀಷನರ ಆಳ್ವಿಕೆಗೆ ಒಳಪಟ್ಟಿತು.

ನೀಚೈರ್ಗಾಚ್ಛತ್ಯುಪಂಚ ದಿಶಾಚಕ್ರನೇ ವಿಕ್ರಮೇಣ

ಅರ್ಥಾಥ್, ಕಾಲಚಕ್ರ ಮಹಿಮೆಯಿಂದ ಉನ್ನತಾವಸ್ಥೆಯಲ್ಲಿರುವವನು

ನೀಚಾವಸ್ಥೆಯನ್ನೂ, ನೀಚಾವಸ್ಥೆಯಲ್ಲಿರುವವನು

ಉನ್ನತಾವಸ್ಥೆಯನ್ನು ಪಡೆಯುವನು

ಮುಮ್ಮಡಿ ಕೃಷ್ಣರಾಜರು ರಚಿಸಿರುವ ಗ್ರಂಥಗಳು

ಮೈಸೂರು ಒಡೆಯರ ವಂಶಜರಲ್ಲಿ ನಂಜರಾಜಾಭಿದ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರ ವ್ಯಕ್ತಿತ್ವವು ಯಾರಿಗೂ ಇರಲಿಲ್ಲವೆಂದರೆ ಅತಿಶಯೋಕ್ತಿಯಲ್ಲ. ಇದಕ್ಕೆ ಕಾರಣ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರು ರಾಜಧರ್ಮವನ್ನು ಹಾಗೂ ರಾಜನೀತಿಯನ್ನು ಚೆನ್ನಾಗಿ ಅಧ್ಯಯನ ಮಾಡಿ ಅವುಗಳನ್ನು ಅಕ್ಷರಸಹ ಪರಿಪಾಲಿಸಿದ್ದಾರೆ. ಮೈಸೂರು ಒಡೆಯರ ವಂಶಜರಲ್ಲಿ ಧರ್ಮಶಾಸ್ತ್ರವನ್ನು ಬಲ್ಲವರೆಂದರೆ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರೊಬ್ಬರೆ, ಇವರು ಮಾಡಿರುವ ದಾನ, ಮಹಾದಾನಗಳು, ಸ್ಥಾಪಿಸಿರುವ ಅಗ್ರಹಾರಗಳು ಹಾಗೂ ವಿವಿಧ ಮತ ಧರ್ಮಗಳಿಗೆ ಸ್ಥಾಪಿಸಿರುವ ಮಠಗಳು ಹಾಗೂ ಅವರು ರಚಿಸಿರುವ ಗ್ರಂಥಗಳಿಂದ ಈ ಮಹಾನ್ ವ್ಯಕ್ತಿಯ ವ್ಯಕ್ತಿತ್ವವು ಎಂಥವರಿಗಾದರೂ ಗೋಚರಿಸದೆ ಇರಲಾರದು.

ಮುಮ್ಮಡಿ ಶ್ರೀ ಕೃಷ್ಣರಾಜರ ಧರ್ಮ ಮಾರ್ಗ ಹಾಗೂ ಔದಾರ್ಯ ದಾತೃಕರ್ತೃತ್ವ ಮತ್ತು ವಿದ್ವತ್‌ಪಕ್ಷ ಪಾತದಿಂದ ಅವರ ಆಸ್ಥಾನವು ಪಂಡಿತರಿಂದ ಆವೃತ್ತಗೊಳ್ಳುವಂತಾಯಿತು. ಇವರು ಸ್ವತಃ ಕವಿಗಳಾಗಿದ್ದು 58 ಗ್ರಂಥಗಳನ್ನು ರಚಿಸಿದ್ದಾರೆ ಎಂದು ಶ್ರೀಮಾನ್ ಆರ್. ನರಸಿಂಹಾಚಾರ್ಯರು ತಮ್ಮ ಕರ್ನಾಟಕ ಕವಿಚರಿತ್ರೆಯಲ್ಲಿ ತಿಳಿಸಿದ್ದಾರೆ.

ಈ ಗ್ರಂಥಗಳಲ್ಲಿ ಹಲವನ್ನು ಆಸ್ತಾನ ಪಂಡಿತರಿಗೆ ಸೂಚನೆಯನ್ನು ಕೊಟ್ಟು ಬರೆಸಿರಬಹುದು ಎಂದೂ, ಕೆಲವು ಗ್ರಂಥಗಳ ರಚನಾಕಾಲವನ್ನೂ ಕೂಡ ತಿಳಿಸಿದ್ದಾರೆ. ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರು ತಮ್ಮನ್ನು ಸ್ವಯಂವೃತ ಕವಿತಾವಧೂರತ್ನ, ಉಭಯಕವಿತಾ ಲಕ್ಷಣವಿಕ್ಷಣ ಎಂದು ವಿಶ್ಲೇಷಿಸಿಕೊಂಡಿರುವುದನ್ನು ತಿಳಿಸಿ, ಕೆಲವು ಗ್ರಂಥಗಳ ವಿಷಯವಾಗಿ ಕೆಲವು ಅಂಶಗಳನ್ನು ಕೂಡ ತಿಳಿಸಿರುತ್ತಾರೆ.

ಶ್ರೀಮಾನ್ ಶ್ರೀನಿವಾಸ ಹಾವನೂರರವರು ತಮ್ಮ ಹೊಸಗನ್ನಡದ ಅರುಣೋದಯದಲ್ಲಿ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರ ಜೀವನ ಹಗೂ ವ್ಯಕ್ತಿತ್ವವನ್ನು ತಿಳಿಸುತ್ತಾ ಮುಮ್ಮಡಿಯವರ ಪ್ರಾರಂಭಕಾಲದ ವಿದ್ವಾಂಸರಲ್ಲಿ ಶ್ರೀ ವೈಷ್ಣವ ಮತದ ಕರೂರು ಶ್ರೀನಿವಾಸಾಚಾರ್ಯರು ಪ್ರಮುಖರು. ಅವರ ಶಿಷ್ಯರಾಗಿದ್ದ ತಿರುಮಲೈ ರಂಗಾಚರ್ಯರು ಮುಮ್ಮಡಿಯವರಿಗೆ ಸಂಸ್ಕೃತದ ಅಭ್ಯಾಸ ಮಾಡಿಸಿದ್ದರು. ಚತುಃಶಾಸ್ತ್ರ ಪಂಡಿತರೆನಿಸಿ, ಪೇಶ್ವೆಯವರಿಂದ ಸನ್ಮಾನಿತರಾಗಿದ್ದ ತ್ರ್ಯಂಬಕ ಶಾಸ್ತ್ರಿಗಳನ್ನು ಕೃಷ್ಣರಾಜರು ತಾವಗಿ ಬರಮಾಡಿಕೊಂಡಿದ್ದರು. ಕುಣಿಗಲ್ ರಾಮಾಶಾಸ್ತ್ರಿಗಳು ತ್ರ್ಯಂಬಕ ಶಾಸ್ತ್ರಿಗಳಲ್ಲಿ ವಿದ್ಯೆ ಕಲಿತು ತರ್ಕಶಾಸ್ತ್ರ ಮತ್ತು ವೇದಾಂತಗಳಲ್ಲಿ ವಿಶೇಷ ಪಾಂಡಿತ್ಯವನ್ನು ಸಂಪಾದಿಸಿದ್ದರು. ಕಾಶಿಯಲ್ಲಿ ಅನೇಕ ವರ್ಷ ವ್ಯಾಸಂಗಮಾಡಿ ಬಂದಿದ್ದ ದ್ವೈತ ಸಿದ್ಧಾಂತಿ ತಿಮ್ಮಣ್ಣಾಚಾರ್ಯರು ಅನ್ಯ ವಂಶಸ್ಥರ ವಾಕ್ಯಾರ್ಥ ಕಾಲದಲ್ಲಿ ತ್ರಯಸ್ಥರಾಗಿರುವಷ್ಟು ಗೌರವವನ್ನು ಹೊಂದಿದ್ದರು. ಒಂದೊಂದು ವಿದ್ಯೆಯಲ್ಲಿ ವಿಶೇಷ ಸಾಧನೆಯನ್ನು ಹೊಂದಿದ್ದ ವಿವಿಧ ವಿದ್ವಾಂಸರು ಆಸ್ಥಾನದಲ್ಲಿ ಇದ್ದರು. ವಿಷ್ಣುಪಾದಾಚಾರ್ಯರು ಖಗೋಲ ಜ್ಯೋತಿಷ್ಯಗಳಲ್ಲಿ ಅಪ್ರತಿಮನಾಗಿದ್ದರೆ, ರಾಜೇಶ್ವರಶಾಸ್ತ್ರಿಗಳು ಮಂತ್ರಾಗಮದಲ್ಲಿ ಪ್ರವೀಣರಾಗಿದ್ದರು. ಸೋಸಲೆ ಗರಳಪುರಿಶಾಸ್ತ್ರಿ ಮತ್ತು ಕಾಶೀ ಶೇಷಶಾಸ್ತ್ರಿ ಇವರು ಅನುಕ್ರಮವಾಗಿ ಅಲಂಕಾರ, ವ್ಯಾಕರಣಶಾಸ್ತ್ರಗಳಲ್ಲಿ ವಿಖ್ಯಾರರೆನಿಸಿದ್ದರು. ಮಹದೇವಶಾಸ್ತ್ರಿಯು ಶಕ್ತಿವಿಶಿಷ್ಟಾದ್ವೈತದ ಪಂಡಿತನಾಗಿ ಆಸ್ಥಾನದಲ್ಲಿಯೇ ಇದ್ದನು. ಎಂದು ತಿಳಿಸಿ ಇನ್ನೂ ಹಲವು ವಿದ್ವಾಂಸರುಗಳ ಹೆಸರುಗಳನ್ನು ಹೀಗೆ ತಿಳಿಸಿದ್ದಾರೆ. ಪೆರಿಯ ಕೃಷ್ಣಮಾಚಾರ್ಯ, ಅನವಟ್ಟಿ ಶ್ರೀನಿವಾಸಾಚಾರ್ಯ, ರಾಮಶೇಷ ಶಾಸ್ತ್ರಿ, ಸಜ್ಜಯಂ ತಾತಚಾರ್ಯ, ಕೆಂಪುನಾರಯಣ, ಶ್ರೀನಿವಾಸ ಕವಿ, ತಮ್ಮಯ ಕವಿ, ಮದ್ದಗಿರಿ ನಂಜಪ್ಪ ಮತ್ತು ಅಳಿಯ ಲಿಂಗರಾಜ ಅರಸಿನವರು.

ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರ್‌ರವರು ಪಂಡಿತರೂ, ಕಲಾವಿದರೂ ಇವರುಗಳನ್ನು ಬರಮಾಡಿಕೊಂಡು ವಿದ್ವದ್‌ಗೋಷ್ಠಿ, ಸುಖಸಂಕಥಾವಿನೋದ, ಪುರಾಣವಾಚನ, ಕೀರ್ತನೆ, ಯಕ್ಷಗಾನ, ಇವುಗಳಲ್ಲಿ ತಲ್ಲೀನರಾಗಿರುತ್ತಿದ್ದರು. ಅರಮನೆಯ ಖಾಸಾ ಜನರು, ಅಧಿಕಾರಿಗಳು, ಇವರುಗಳೊಂದಿಗೆ ಚದುರಂಗ, ಗಂಜೀಪು ಮುಂತಾದ ಆಟಗಳಲ್ಲಿ ಭಾಗವಹಿಸುತ್ತಿದ್ದರು. ಇವರು ಪ್ರಪ್ರಥಮವಾಗಿ ಮುದ್ರಾಯಂತ್ರವನ್ನು ಅರಮನೆಯಲ್ಲಿಯೇ ಸ್ಥಾಪಿಸಿ, ಹಲವಾರು ಗ್ರಂಥಗಳನ್ನು ಹೊರತಂದಿದ್ದಾರೆ. ವಿದೇಶಿಯರಿಗಿಂತ ಮುಂಚಿತವಾಗಿಯೇ ಇವರು ಬಣ್ಣದ ಮುದ್ರಣವನ್ನು ಪ್ರಯೋಗಿಸಿದ್ದಾರೆ ಎಂಬುದು ಆಶ್ಚರ್ಯದ ಸಂಗತಿ.

ಮುಮ್ಮಡಿ ಕೃಷ್ಣರಾಜ ಮಹೀಪಾಲರಿಗೆ ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಪಾಂಡಿತ್ಯವಿದ್ದು ಆಗಿನ ರಾಜಕೀಯ ವ್ಯವಹಾರಕ್ಕೆ ಅಗತ್ಯವಿದ್ದ ಹಿಂದೂಸ್ಥಾನಿ ಮತ್ತು ಮರಾಠಿ ಭಾಷೆಗಳು ಹಾಗೂ ಇಂಗ್ಲಿಷ್ ಪತ್ರಿಕೆಗಳನ್ನು ಓದುವುದಕ್ಕೂ ಮತ್ತು ಇನ್ನೊಬ್ಬರು ಮಾತನಾಡುವುದನ್ನು ಅರ್ಥಮಾಡಿಕೊಳ್ಳುವಷ್ಟು ಜ್ಞಾನವಿತ್ತು. ಪರ್ಷಿಯನ್ ಮತ್ತು ತೆಲಗು ಭಾಷೆಗಳನ್ನು ತಕ್ಕಮಟ್ಟಿಗೆ ತಿಳಿದುಕೊಂಡಿದ್ದರು.

ಶ್ರೀಮಾನ್ ಹಾವನೂರರವರು ಮುಮ್ಮಡಿ ಕೃಷ್ಣರಾಜ ಒಡೆಯರವರ ಗ್ರಂಥಗಳ ಬಗ್ಗೆ ವಿಶ್ಲೇಷಣೆಯನ್ನು ಮಾಡಿ ಮುಮ್ಮಡಿಯವರು ಸಾಹಿತ್ಯಕವಾಗಿ, ಸಾಂಸ್ಕೃತಿಕವಾಗಿ ದೂರದರ್ಶಿತ್ವ ಉಳ್ಳವರು. ಇವರ ಜೀವಿತ ಕಾಲದ ಸಾಧನೆ ಅವಿಸ್ಮರಣೀಯವಾದುದು ಎಂದು ಬಣ್ಣಿಸಿದ್ದಾರೆ.

ಮೈಸೂರು ರಾಜವಂಶ ಚರಿತ್ರೆ (ಅ. 8) ಮತ್ತು ರಾಜವಂಶ ರತ್ನಪ್ರಭ. (ಅ. 5,7) ಈ ಎರಡು ಗ್ರಂಥಗಳೂ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರ ಗ್ರಂಥವಲ್ಲವೆಂದೂ ಶ್ರೀಮಾನ್ ಹಾವನೂರರರವರು ತಿಳಿಸಿದ್ದಾರೆ. ರಾಜವಂಶ ರತ್ನಪ್ರಭಾವನ್ನು 1834ರಲ್ಲಿ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯವರ ಆಸ್ಥಾನ ಕವಿಯಾದ ತಮ್ಮಯ್ಯ ಶಾಸ್ತ್ರಿಯೂ ವಿರಚಿಸಿರುವುದು ಸ್ಪಷ್ಟ ಮೈಸೂರು ಮಹಾರಾಜರ ವಂಶಾವಳಿಯನ್ನು ಅದ್ಯಾವತ್ತಾಗಿ ಬರೆದು ಪ್ರಕಟಿಸಿರುವ ಬಿ. ರಾಮಕೃಷ್ಣರಾಯರು ತಮ್ಮ ಉಪೋದ್ಘಾತದಲ್ಲಿ ಮುಮ್ಮಡಿಯವರೇ ತಮ್ಮ ವಂಶ ಚರಿತ್ರೆಯನ್ನು ಬರೆದಿದ್ದಾರೆಂದು ತಿಳಿಸಿದ್ದಾರೆ. ಈ ಪ್ರತಿಯು ಅರಮನೆಯ ಸರಸ್ವತೀ ಭಂಡಾರದಲ್ಲಿ ಇದ್ದುದನ್ನು ಬಿ. ರಾಮಕೃಷ್ಣರಾಯರು ಶೃತಪಡಿಸಿದಂತಾಯಿತು. ಆದರೆ ಈ ಹಸ್ತಪ್ರತಿಯು ಯಾವ ಕಾರಣದಿಂದ ಮುದ್ರಿತವಾಗಿ ಪ್ರಕಟವಾಗಿಲ್ಲ, ಇದಕ್ಕೆ ಕಾರಣವೇನಿರಬಹುದು. ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರ ಆಳ್ವಿಕೆಯ ಮಧ್ಯಕಾಲದ ಹೊತ್ತಿಗೆ ನಗರದ ಪುಟ್ಟಯ್ಯ ಹಾಗೂ ಶ್ಯಾನುಭೋಗ ವೆಂಕಟರಮಣಯ್ಯ, ಇವರಿಬ್ಬರೂ ಬರೆದ ವಂಶಾವಳಿಗಳ ಪ್ರತಿಗಳು ಈಗಲೂ ಕೆಲವು ಗ್ರಂಥಾಲಯಗಳಲ್ಲಿ ಇರಬಹುದೆಂದು ಊಹಿಸಬಹುದಾಗಿದೆ.

ಡಾ. ಶ್ರೀನಿವಾಸ ಹಾವನುರ ರವರು ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರ ಗ್ರಂಥಗಳ ಕರ್ತೃತ್ವವನ್ನು ಚೆನ್ನಾಗಿ ವಿಶ್ಲೇಷಿಸಿ ನಮಗೆ ಅವರ ಸ್ಪಷ್ಟ ಅಭಿಪ್ರಾಯವನ್ನು ಕೊಟ್ಟಿದ್ದಾರೆ. ಕವಿಚರಿತ್ರೆಕಾರರ ಅಭಿಪ್ರಾಯದಂತೆ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರು ತಮ್ಮ ಆಸ್ಥಾನ ವಿದ್ವಾಂಸರುಗಳಿಗೆ ಸೂಚನೆಗಳನ್ನು ಕೊಟ್ಟು ಕೆಲವು ಗ್ರಂಥಗಳನ್ನು ಬರೆಸಿರುವುದು ನಮಗೆ ಸ್ಪಷ್ಟವಾಗುತ್ತದೆ. ಶ್ರೀಮಾನ್ ಹಾವನೂರ ರವರು ತಮ್ಮ ವಿಶ್ಲೇಷಣೆಯನ್ನು ಮುಂದುವರಿಸುತ್ತಾ, ಕೃತಿ ಸಮೀಕ್ಷೆ ಎಂಬ

ಶೀರ್ಷಿಕೆಯಲ್ಲಿ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರು ಸಂಸ್ಕೃತ ಹಾಗೂ ಕನ್ನಡದಲ್ಲಿ ಅದ್ವಿತೀಯ ಪಾಂಡಿತ್ಯ ಹೊಂದಿದ್ದರೆಂದೂ, ಅವರಿಗೆ ದೈವಭಕ್ತಿ ಹಾಗೂ ಧರ್ಮಶ್ರದ್ಧೆಗಳು ಇದ್ದುವೆಂದೂ, ಅವರ ರಚಿಸಿರುವ ಶ್ರೀತತ್ವ ನಿಧಿಯಿಂದ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರು ಧರ್ಮಶಾಸ್ತ್ರವನ್ನ ಚೆನ್ನಾಗಿ ಅಧ್ಯಯನ ಮಾಡಿ ತಮ್ಮ ನಿಜ ಜೀವನದಲ್ಲಿ ಅದನ್ನು ಕಾರ್ಯರೂಪದಲ್ಲಿ ಮಾಡಿ ತೋರಿಸಿದ್ದಾರೆ ಎಂದು ಶ್ಲಾಘಿಸಿದ್ದಾರೆ.

ಶ್ರೀಮಾನ್ ಆರ್. ನರಸಿಂಹಾಚಾರ್ಯರಂತು ತಮ್ಮ ಕರ್ನಾಟಕ ಕವಿಚರಿತೆಯಲ್ಲಿ ಮುಮ್ಮಡಿ ಶ್ರೀ ಕೃಷ್ಣರಾಜರು ರಚಿಸಿರುವ ಗ್ರಂಥಗಳ ಕಿರುಪರಿಚಯವನ್ನು ನಮಗೆ ಮಾಡಿಕೊಟ್ಟಿದ್ದಾರೆ. ಇಲ್ಲಿ ನಾನು ನನಗೆ ತಿಳಿದ ಮಟ್ಟಿಗೆ ಸಂಗ್ರಹಿಸಿದ ವಿಷಯವನ್ನು ವಿಷದಪಡಿಸಿದ್ದೇನೆ ಎಂದು ತಿಳಿಸಿದ್ದಾರೆ.

1. ಸೌಗಂಧಿಕಾಪರಿಣಯ : ಈ ಗ್ರಂಥವನ್ನು ಮುಮ್ಮಡಿಯವರು ಪದ್ಯರೂಪವಾಗಿಯೂ ಹಾಗೂ ಗದ್ಯರೂಪವಾಗಿಯೂ ರಚಿಸಿದ್ದಾರೆ. ಪದ್ಯಗ್ರಂಥವು ಭಾಮಿನೀ ಷಟ್ಪದಿಯಲ್ಲಿ ಬರೆದಿದೆ. ಇದರಲ್ಲಿ 100 ಸಂಧಿಗಳಿದ್ದು 6040 ಪದ್ಯಗಳನ್ನು ಅಳವಡಿಸಲಾಗಿದೆ. ಗದ್ಯಗ್ರಂಥವು 36 ಆಶ್ವಾಸಗಳಾಗಿ ವಿಭಾಗಿಸಲ್ಪಟ್ಟಿವೆ. ಇದಕ್ಕೆ ಸಂಕ್ಷೇಪ ಸೌಗಂಧಿಕಾ ಪರಿಣಯವೆಂಬ ಹೆಸರೂ ಇರುವಂತೆ ತೋರುತ್ತದೆ. ಪದ್ಯಗ್ರಂಥದ ಆರಂಭದಲ್ಲಿ ಚಾಮುಂಡೇಶ್ವರಿ ಹಾಗೂ ನಂಜುಂಡೇಶ್ವರನನ್ನು ಸ್ತುತಿಸಿದ್ದಾರೆ. ಈ ಕಥೆಯನ್ನೇ ಸಂಗ್ರಹವಾಗಿ ಮುಮ್ಮಡಿಯವರ ಆಜ್ಞಾನುಸಾರ ದೇವಲಾಪುರದ ನಂಜುಂಡನು ಸಾಂಗತ್ಯದಲ್ಲಿ ಬರೆದಿದ್ದಾನೆ.

ಸೌಗಂಧಿಕಾ ಪರಿಣಯವನ್ನು ಮುಮ್ಮಡಿಯವರು ಶಾಲಿವಾಹನ ಶಕ 1764ನೇ ಶುಭಕೃತು ಸಂವತ್ಸರದ ಆಷಾಢ ಶುದ್ಧ 7 ಗುರುವಾರದಲ್ಲಿ ರಚಿಸಿದ್ದರೆ. ಇದರಲ್ಲಿ ಎರಡು ಸಂಪುಟಗಳಿವೆ. ಪೂರ್ವಾರ್ಧವು ಹದಿನೆಂಟು ಅಶ್ವಾಸಗಳಿಂದಲೂ ಉತ್ತರಾರ್ಧವು ಹದಿನೆಂಟು ಅಶ್ವಾಸಗಳಿಂದಲೂ ಕೂಡಿ ಒಟ್ಟು 36 ಅಶ್ವಾಸಗಳಿವೆ. ಇವೆರಡೂ ಸಂಪುಟಗಳಿಂದ ಸುಮಾರು 1600 ಪುಟಗಳಿವೆ.

ಸೌಗಂಧಿಕಾ ಪರಿಣಯದಲ್ಲಿ ಮುಮ್ಮಡಿಯವರ ಕುಲದೇವತೆ ಹಾಗೂ ಕುಲಕ್ರಮಾಗತೇಶ ದೇವತಾವಿಷಯವನ್ನು ಹೀಗೆ ತಿಳಿಸಿದ್ದಾರೆ.

"... ಲೋಕಪಾವನೆಯಾದ, ಎನ್ನ ಕುಲದೇವತೆಯಾದ ಶ್ರೀ ಚಾಮುಂಡೇಶ್ವರೀ ಎಂಬ ಹೆಸರುಳ್ಳ ಮಹಾದೇವಿಯ ಚರಣ ಕಮಲಂಗಳಂ ಭಕ್ತಿಯಿಂದ ಹೃದಯದೊಳಿಟ್ಟು ಸಾಷ್ಟಾಂಗವೆರಗಿ, ಈ ನವೀನ ಕೃತಿಯು ಲೋಕವಿಖ್ಯಾತಮಾಗಿ ಅಚಂದ್ರಾರ್ಕಮಾಗಿರುವಂತೆ ಪ್ರಾರ್ಥನೆಯಂ ಮಾಡಿ, ಆ ಬಳಿಕ ನಮ್ಮ

ಕುಲಕ್ರಮಾಗತೇಷ ದೇವತಾ ಸ್ವರೂಪನಾದ ಶ್ರೀ ನಂಜುಂಡೇಶ್ವರಭಿದಾನದಿಂದ ಮೆರೆಯುವ ಪಾರ್ಥಿವೇಶ್ವರನು ನನ್ನ ಕರಪೀಠದೊಳಿಂದು ಪೂಜೆಗೊಂಡು ಯನ್ನಿಷ್ಟಾರ್ಥಮಂ ಕೊಟ್ಟು ಸಲಹಬೇಕೆಂದು ನಮಸ್ಕಾರಪೂರ್ವಕವಾಗಿ ಬಿನ್ನೈಸಿ..."

2. ಶ್ರೀ ಕೃಷ್ಣ ಕಥಾಸಾರ ಸಂಗ್ರಹ : ಈ ಗ್ರಂಥವು ಎರಡು ಸಂಪುಟಗಳಲ್ಲಿದೆ. ಎರಡು ಸಂಪುಟಗಳನ್ನೂ ಶಾಲಿವಾಹನ ಶಕ 1764ನೇ ಶುಭಕತ್ಯ ಸಂವತ್ಸರ ಚೈತ್ರ ಶುದ್ಧ 1ರಲ್ಲಿ ಪೂರ್ಣಗೊಳಿಸಿದ್ದಾರೆ. ಪೂರ್ವಾರ್ಧದಲ್ಲಿ 165 ಅಧ್ಯಾಯಗಳಿದ್ದು ಅದನ್ನು 1546 ಪುಟಗಳಲ್ಲಿ ಅಳವಡಿಸಲಾಗಿದೆ.

ಸಂಪುಟ – 1 : 1. ಉತ್ಪತ್ತಿ ಕಾಂಡ : 36 ಅಧ್ಯಾಯ – 484 ಪುಟಗಳು.

2. ವಿಲಾಸ ಕಾಂಡ : 54 ಅಧ್ಯಾಯ – 472 ಪುಟಗಳು

3. ಕಲ್ಯಾಣ ಕಾಂಡ : 75 ಅಧ್ಯಾಯ – 590 ಪುಟಗಳು

ಮೂರು ಕಾಂಡಗಳಿಂದ : 165 ಅಧ್ಯಾಯ – 1546 ಪುಟಗಳು

ಸಂಪುಟ– 2 : 1. ಸಂತಾನ ಕಾಂಡ : 100 ಅದ್ಯಾಯ – 835 ಪುಟಗಳು.

2. ಅವತಾರ ಕಾಂಡ : 100 ಅಧ್ಯಾಯ – 640 ಪುಟಗಳು

ಎರಡು ಕಾಂಡಗಳಿಂದ : 200 ಅಧ್ಯಾಯ – 1476 ಪುಟಗಳು.

ಎರಡು ಸಂಪುಟಗಳಿಂದ : 5 ಕಾಂಡಗಳು, 365 ಅಧ್ಯಾಯಗಳಿದ್ದು 3022 ಪುಟಗಳಿವೆ.

ಈ ಗ್ರಂಥದ ಪ್ರಾರಂಭದಲ್ಲಿ ಗಣಪತಿ, ಶಾರದ ಮತ್ತು ಚಾಮುಂಡೇಶ್ವರಿಯನ್ನು ಸ್ತುತಿಸಿದ್ದಾರೆ. ಈ ಗ್ರಂಥವನ್ನು ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರ ಆಜ್ಞಾನುಸಾರವಾಗಿ ರಾಯಸದ ನಾರಣಯ್ಯನ ಮೊಮ್ಮಗನಾದ ಪ್ರಸನ್ನಯ್ಯನ ಮಗನಾದ ನರಸಿಂಗಯ್ಯನ ಮಗ ಸುಬ್ಬಯ್ಯನ ಮಗ ರಾಯಸದ ವೆಂಕಪ್ಪನು ಬರೆದು 1764ನೇ ಶುಭಕೃತು ಸಂವತ್ಸರದ ಜ್ಯೇಷ್ಠ ಶುದ್ಧ 1 ರಲ್ಲು ಅರಮನೆಗೆ ಒಪ್ಪಿಸಿದ್ದಾನೆ.

3. ಶಕುಂತಲೋಪಾಖ್ಯಾನ : ಈ ಗ್ರಂಥಕ್ಕೆ ಶಾಕುಂತಲ ನಾಟಕ ನವೀನ ಟೀಕೆ ಎಂಬ ಹವಸರೂ ಉಂಟು. ಈ ನಾಟಕದೊಡನೆ ವಿಕ್ರಮೋರ್ವಶೀಯ, ಮಾಳವಿಕಾಗ್ನಿಮಿತ್ರೀಯ ಎಂಬುವುಗಳನ್ನು ಸೇರಿಸಿ ಕಾಳಿದಾಸನ ಈ ನಾಟಕ ತ್ರಯಕ್ಕೂ ಟೀಕೆಯನ್ನು ಬರೆದು ಒಟ್ಟು ಗ್ರಂಥಕ್ಕೆ ಕೃಷ್ಣರಾಜ ವಾಣೀವಿಲಾಸ

ರತ್ನಾಕರ ಎಂಬ ಹಎಸರನ್ನು ಕೊಟ್ಟಿದ್ದಾರೆ. ಪ್ರತಿ ನಾಟಕವು 4 ಕಲ್ಲೋಲಗಳಾಗಿಯೂ, ಪ್ರತಿ ಕಲ್ಲೋಲವು 4 ತರಂಗಗಳಾಗಿಯೂ ವಿಭಾಗಿಸಲ್ಪಟ್ಟಿದೆ. ನಾಟಕದ ಕಡೆಯಲ್ಲಿ ಗದ್ಯವಿದ್ದು ಅದು ವರ್ಷಾಕಾಲದ ಪ್ರವಾಹದಂತೆ ಗಂಭಿರವಾಗಿ ಹಾಗೂ ನಿರರ್ಗಳವಾಗಿ ಹೋಗುತ್ತದೆ, ಇದರಿಂದ ಮುಮ್ಮಡಿಯವರಿಗೆ ಗದ್ಯದಲ್ಲಿದ್ದ ಪ್ರೌಢಿಮೆಯು ವ್ಯಕ್ತವಾಗುತ್ತದೆ.

4. ಭರತಸಾರ ಸಂಗ್ರಹ ಟೀಕೆ : ಈ ಗ್ರಂಥದಲ್ಲಿ ಮುಮ್ಮಡಿ ಕೃಷ್ಣರಾಜ ಮಹೀಪಾಲರು ಸಂಗೀತ, ನಾಟ್ಯ ಮುಂತಾದ ವಿಷಯಗಳನ್ನು ಅಳವಡಿಸಿ ಅವುಗಳ ವಿಚಾರವಾಗಿ ಸಂಕ್ಷಿಪ್ತವಾಗಿ ತಿಳಿಸಿದ್ದಾರೆ.

5. ಭಾರತ : ಇದು ಮಹಾಭಾರತದ ಕನ್ನಡ ಟೀಕೆ. ಇದನ್ನು 1820ರಲ್ಲಿ ರಚಿಸಿದ್ದಾರೆ. ಗ್ರಂಥದ ಆರಂಭದಲ್ಲಿ ನಂಜುಂಡೇಶ್ವರ ಹಾಗೂ ಚಂದ್ರನನ್ನು ಸ್ತುತಿಸಿದ್ದಾರೆ.

6. ಸೂರ್ಯಚಂದ್ರಾದಿ ವಂಶಾವತರಣ : ಈ ಗ್ರಂಥವನ್ನು 1852ರಲ್ಲಿ ಸಂಸ್ಕೃತದಲ್ಲಿ ರಚಿಸಿದ್ದಾರೆ. ಇದರಲ್ಲಿ ಪೂರ್ವರಾಜರ ಚರಿತ್ರೆಯನ್ನು ಸಂಕ್ಷಿಪ್ತವಾಗಿ ತಿಳಿಸಲಾಗಿದೆ.

7. ಚಾಮುಂಡಾ ಲಘು ನಿಘಂಟು : ಈ ಗ್ರಂಥವನ್ನು ಕ್ರಿ.ಶ. 1826ರಲ್ಲಿ ರಚಿಸಿದ್ದಾರೆ. ಇದು 152 ಶ್ಲೋಕಗಳನ್ನು ಒಳಗೊಂಡಿದೆ. ಇದರಲ್ಲಿ ದೇವತೆಗಳು ಧರಿಸುವ ಆಯುಧಗಳು, ಅವರ ವಾಹನ, ಮೃಗ ಇತ್ಯಾದಿಗಳ ನಾಮಾವಳಿ ಇದೆ. ಈ ಕೃತಿಯ ಆರಂಭ ಹಾಗೂ ಅಂತ್ಯದಲ್ಲಿ ಮುಮ್ಮಡಿಯವರ ವೈಭವಯುಕ್ತವಾದ ಗದ್ಯವಿಲ್ಲ. ಅದಕ್ಕೆ ಕನ್ನಡದಲ್ಲಿ ಟೀಕೆಯೂ ಇದೆ. ಮೂಲ ಕೃತಿಯನ್ನು ಮುಮ್ಮಡಿಯವರೇ ರಚಿಸಲಾಗಿದ್ದು ಟೀಕೆಯನ್ನು ಕಾರ್ಕಳ ಜ್ಯೋತ್ಸ್ಯನೆಂಬುವವನು ಕ್ರಿ.ಶ. 1848ರಲ್ಲಿ ಬರೆದಂತೆ (ಪ್ರತಿ ಮಾಡಿದಂತೆ) ಮೈಸೂರಿನ ಅಧ್ಯಯನ ಸಂಸ್ಥೆಯ ಕೈಬರಹದ ಪ್ರತಿಯಲ್ಲಿ ಉಲ್ಲೇಖವಾಗಿದೆ.

8. ಶ್ರೀತತ್ವನಿಧಿ : ಶಾಸ್ತ್ರ ವಿಷಯಕ ಗ್ರಂಥಗಳಲ್ಲಿ ಅನೇಕವು ಸಂಸ್ಕೃತ ಭಾಷೆಯಲ್ಲಿ ಇವೆ. ಅವುಗಳಲ್ಲಿ ಶ್ರೀತತ್ವನಿಧಿಯು ವಿಶೇಷ ಮಹತ್ವದ್ದು. ಇದನ್ನು ಕ್ರಿ.ಶ. 1823ರಲ್ಲಿ ಮುಮ್ಮಡಿಯವರು ರಚಿಸಿದ್ದಾರೆ. ಈ ಗ್ರಂಥವು ಮುಮ್ಮಡಿಯವರ ಜೀವಿತಕಾಲದಲ್ಲಿ ಪ್ರಕಾಶಕ್ಕೆ ಬರಲಿಲ್ಲ, ಅವರು ಸ್ವರ್ಗಸ್ಥರಾದ ನಂತರ ಈ ಗ್ರಂಥವು ಮುಂಬಯಿಯಲ್ಲಿ ಮುದ್ರಣ ಹೊಂದಿ ಪ್ರಕಾಶಕ್ಕೆ ಬಂದಿತು. ಇದರಲ್ಲಿ ಶಕ್ತಿ, ವಿಷ್ಣು, ಶಿವ, ಬ್ರಹ್ಮ, ಗ್ರಹನಕ್ಷತ್ರ, ವೈಷ್ಣವ, ಶೈವ, ಆಗಮ

ಮತ್ತು ಕೌತುಕ ಎಂಬ ಒಂಬತ್ತು 'ನಿಧಿ'ಗಳಿವೆ. ಈ ಗ್ರಂಥವೂ ಹಿಂದೂ ಧರ್ಮಕ್ಕೆ ಸಂಬಂಧಿಸಿದ ಅನೇಕ ವಿಷಯಗಳ ಸಂಕಲನ ಕೋಶವೆಂದೇ ಹೇಳಬೇಕು. ಮೊದಲಿನ ನಾಲ್ಕು ನಿಧಿಗಳಲ್ಲಿ ಹಲವು ಹಲವು ದೇವತೆಗಳ ಸ್ತೋತ್ರಗಳಿದ್ದು, ಗ್ರಹನಿಧಿಯಲ್ಲಿ ಸೂರ್ಯಚಂದ್ರಾದಿ ಗ್ರಹಗಳು ಮತ್ತು ಜ್ಯೋತಿಷ್ಯ ವಿಚಾರಗಳು ವರ್ಣಿತವಾಗಿವೆ. ನವನಿಧಿಗಳಲ್ಲಿ ಇದೇ ದೊಡ್ಡದಾಗಿದ್ದು ಖಗೋಳ ಹಾಗೂ ಜ್ಯೋತಿಷ ಶಾಸ್ತ್ರಗಳಲ್ಲಿ ಮುಮ್ಮಡಿಯವರಿಗಿದ್ದ ಒಲವನ್ನು ಚೆನ್ನಾಗಿ ವ್ಯಕ್ತಪಡಿಸುತ್ತದೆ. ವೈಷ್ಣವ ನಿಧಿಯಲ್ಲಿ ರಾಮಾನುಜೀಯ ಪಂಥ ಮತ್ತು ಆಳ್ವಾರರ ವಿಚಾರ ಬಂದಿದ್ದರೆ, ಶೈವ ನಿಧಿಯಲ್ಲಿ ಲಿಂಗಪೂಜೆ, ಶೈವ ಕ್ಷೇತ್ರ ಇವುಗಳನ್ನು ವಿವರಿಸಲಾಗಿದೆ. ಆಗಮ ನಿಧಿಯಲ್ಲಿ ಪುರಾಣಗಳ ಪ್ರಸ್ತಾಪವಿದೆ. ಕೊನೆಯದಾದ ಕೌತುಕ ನಿಧಿಯು ನಿಜವಾಗಿಯೂ ಕೌತುಕವಾಗಿದ್ದು ಅದರಲ್ಲಿ ಗಂಜೀಪು ಮುಂತಾದ ಆಟಗಳ ವರ್ಣನೆ ಇದ್ದು ಅಪೂರ್ವವೆನಿಸಿದೆ. ಅದರಲ್ಲಿ ಒಟ್ಟು 32 ಕ್ರೀಡೆಗಳ ಉಲ್ಲೇಖವಿದ್ದು 16 ಗಂಜೀಪಿನ ಆಟಗಳ ಮತ್ತು ಏಳು ಪಗಡೆಯ ಆಟಗಳ ಪ್ರಕಾರಗಳನ್ನು ಮುಖ್ಯವಾಗಿ ತಿಳಿಸಲಾಗಿದೆ. ಪ್ರತಿಯೊಂದಕ್ಕೂ ವಿವಿಧ ದೇವತೆಗಳ ಹೆಸರುಗಳಿವೆ. ಒಂದು ಆಟಕ್ಕೆ ಕೃಷ್ಣರಾಜರ ಹೆಸರನ್ನೇ ಇಟ್ಟಿದೆ. ಒಂದೊಂದು ಆಟವನ್ನು ವಿವರಿಸಿಯಾದ ಮೇಲೆ ಕೊನೆಯಲ್ಲಿ ಅದು ಕೃಷ್ಣರಾಜ ನಿರ್ಮಿತವೆಂದು ಹೇಳಿ ಅದರ ರಚನೆಯ ಕಾಲವನ್ನು ತಿಳಿಸಲಾಗಿದೆ.

ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರ್‌ರವರು ಈ ಗ್ರಂಥದಲ್ಲಿ ಒಂಬತ್ತು ವಿಧವಾದ ನಿಧಿಗಳನ್ನು ನಿರೂಪಿಸಿದ್ದಾರೆ. ಅವುಗಳು ಯಾವುವೆಂದರೆ, ಶಕ್ತಿನಿಧಿ, ವಿಷ್ಣುನಿಧಿ, ಶಿವನಿಧಿ, ಬ್ರಹ್ಮನಿಧಿ, ಗ್ರಹನಕ್ಷತ್ರನಿಧಿ, ವೈಷ್ಣವನಿಧಿ, ಶೈವನಿಧಿ, ಆಗಮನಿಧಿ ಮತ್ತು ಕೌತುಕನಿಧಿ.

ಪ್ರಾಚ್ಯವಿದ್ಯಾಸಂಶೋಧನಾಲಯದಲ್ಲಿರುವ ಹಸ್ತಪ್ರತಿಯ (S.A. 852) ಒಂಬತ್ತು ಸಂಪುಟಗಳ ಅಂದರೆ ನವನಿಧಿಗಳ ಪತ್ರಸಂಖ್ಯೆ ಕ್ರಮವನ್ನು ಈ ಕೆಳಗೆ ನೀಡಲಾಗಿದೆ. 1 ರಿಂದ 35 ಸಂಖ್ಯೆಯವರೆಗೆ ಶ್ರೀತತ್ತ್ವನಿಧಿ ಗ್ರಂಥದ ನವನಿಧಿಗಳ ವಿಷಯಾನುಕ್ರಮಣಿಕೆಯನ್ನು ಬರೆಯಲಾಗಿದೆ. ಪುನಃ ಶಕ್ತಿನಿಧಿಯಿಂದ ಗ್ರಂಥದ ಪತ್ರಸಂಖ್ಯೆ ಪ್ರಾರಂಭವಾಗುತ್ತದೆ. ಪ್ರತಿ ಸಂಪುಟದಲ್ಲಿರುವ ಪತ್ರಗಳ ಸಂಖ್ಯೆ, ಚಿತ್ರಗಳ ಸಂಖ್ಯೆ ಹಾಗೂ ಶ್ಲೋಕಗಳ ಸಂಖ್ಯೆಗಳು ಈ ಕೆಳಗಿನಂತಿವೆ–

ಪತ್ರ ಸಂಖ್ಯೆ 1–35 – ವಿಷಯಾನುಕ್ರಮಣಿಕೆ –

| | | | |
|---|---|---|---|
| ಪತ್ರಸಂಖ್ಯೆ 1–66 | – ಶಕ್ತಿನಿಧಿ | – | 106 ವರ್ಣಚಿತ್ರಗಳು |
| ಪತ್ರಸಂಖ್ಯೆ 71–93 | – ವಿಷ್ಣುನಿಧಿ | – | 115 ವರ್ಣಚಿತ್ರಗಳು |
| ಪತ್ರಸಂಖ್ಯೆ 95–125 | – ಶಿವನಿಧಿ | – | 81 ವರ್ಣಚಿತ್ರಗಳು |
| ಪತ್ರಸಂಖ್ಯೆ 130–188 | – ಬ್ರಹ್ಮನಿಧಿ | – | 405 ವರ್ಣಚಿತ್ರಗಳು |
| ಪತ್ರಸಂಖ್ಯೆ 190–321 | – ಗ್ರಹನಿಧಿ | – | 337 ವರ್ಣಚಿತ್ರಗಳು |
| ಪತ್ರಸಂಖ್ಯೆ 323–355 | – ವೈಷ್ಣವ ನಿಧಿ | – | 14 ವರ್ಣಚಿತ್ರಗಳು |
| ಪತ್ರಸಂಖ್ಯೆ 356–392 | – ಶೈವನಿಧಿ | – | 263 ರೇಖಾಚಿತ್ರಗಳು |
| ಪತ್ರಸಂಖ್ಯೆ 394–450 | – ಆಗಮನಿಧಿ | – | 50 ರೇಖಾಚಿತ್ರಗಳು |
| ಪತ್ರಸಂಖ್ಯೆ 454–538 | – ಕೌತುಕನಿಧಿ | – | 162 ರೇಖಾಚಿತ್ರಗಳು |

ವರ್ಣಚಿತ್ರಗಳು ಒಟ್ಟು – 1058

ರೇಖಾಚಿತ್ರಗಳು ಒಟ್ಟು – 475

ಒಟ್ಟು – 1533

1. ಶಕ್ತಿನಿಧಿ ಯಲ್ಲಿ ಚಕ್ರದೇವತೆಗಳು ನಿತ್ಯಕ್ಲಿಪ್ತ ಪೀಡೇಶ್ವರಿ, ಮತೃಕಾ ದುರ್ಗಾ, ವಾರಾಹಿ, ಅನ್ನಪೂರ್ಣ, ಮಹಾಲಕ್ಷ್ಮಿ, ವೀರಲಕ್ಷ್ಮಿ ಹಾಗೂ ವರ್ಣದೇವತೆಗಳ ವರ್ಣನೆ ಇದೆ.

2. ವಿಷ್ಣುನಿಧಿ ಯಲ್ಲಿ ಕೇಶವ, ನಾರಯಣಾಧಿ ಮುರ್ತಿಗಳು ಇದ್ದು ಎಲ್ಲಾ ದೇವತಾ ವರ್ಣನೆಗಳಲ್ಲಿ ಮೂರ್ತಿ ಬಣ್ಣ ಇತ್ಯಾದಿಗಳಿಗೆ ಮಹತ್ವವನ್ನು ನೀಡಿದೆ.

3. ಶಿವನಿಧಿ ಯಲ್ಲಿ ಮಹದೇಶ್ವರ, ತಾಂಡವ, ಸದ್ಯೋಜಾತ, ರುದ್ರ, ಲೀಲಾಮೂರ್ತಿ, ಇತ್ಯಾದಿ ಶಿವರೂಪಗಳನ್ನು ಮತ್ತು ಗಣಪತಿ ಮತ್ತು ಸುಬ್ರಹ್ಮಣ್ಯನನ್ನೂ ಸ್ತುತಿಸಿದ್ದಾರೆ.

4. ಬ್ರಹ್ಮನಿಧಿ ಯಲ್ಲಿ ಪ್ರಜಾಪತಿ ಋಷಿಗಳು, ವೇದ, ವೇದಪತ್ನಿಯರು, ಪಂಚಭೂತ, ದಿಕ್ಕು, ದಿಕ್ಪಾಲಕರು ಹಾಗೂ ಉಪಾಯ ದೇವತೆಗಳ ವಿಷಯಗಳನ್ನು ಅಳವಡಿಸಿದ್ದಾರೆ.

5. ಗ್ರಹನಿಧಿ ಯಲ್ಲಿ ಸೂರ್ಯ, ಚಂದ್ರ, ನವಗ್ರಹ ಪ್ರಭವಾದಿ ಸಂವತ್ಸರಗಳು, ಅಯಾ ಸಂವತ್ಸರಗಳಲ್ಲಿ ಹುಟ್ಟಿದವರ ಲಕ್ಷಣಗಳು, ಋತುಗಳು, ಮಾಸಗಳು, ಆಯಾ ಮಾಸಗಳಲ್ಲಿ ಆಚರಿಸಬೇಕಾದ ವ್ರತಗಳು, ಪ್ರತಿಪದ, ವಾರ, ನಕ್ಷತ್ರ



6

ಮತ್ತು ಮುಹೂರ್ತಗಳ ವಿಷಯವಿದೆ.

6. ವೈಷ್ಣವನಿಧಿ ಗೆ ಅಕರ ಬ್ರಹ್ಮಾಂಡಪುರಾಣ, ರಾಮಾನುಜೀಯ ಪಂಥದ ವಿವರಗಳು, ಆಳ್ವಾರರು, ಆಚಾರ್ಯರು, ಹಾಗೂ ಕ್ಷೇತ್ರಸ್ಥಗಳ ವರ್ಣನೆಯಿದೆ.

25. ಶೈವನಿಧಿ ಯಲ್ಲಿ ಲಿಂಗಪೂಜೆ, ವಿಭೂತಿ ರುದ್ರಾಕ್ಷಿಗಳ ಮಹಾತ್ಮೆ, ಶಿವಕ್ಷೇತ್ರದಿ ವಿಷಯಗಳು ಇವೆ.

26. ಆಗಮನಿಧಿ ಯಲ್ಲಿ ಹದಿನೆಂಟು ಪುರಾಣಗಳು, ಭಾರತ, ಭಗವತಾದಿಗಳ ಶ್ಲೋಕಸಂಖ್ಯೆ, ಆಗಮಗಳು, ಸ್ತ್ರೀಶೂದ್ರಾದಿ ನಾಮೋಪದೇಶ ಕ್ರಮವನ್ನು ತಂತ್ರಸಾರದಿಂದ ವಿಷಯಗಳನ್ನು ಸಂಗ್ರಹಿಸಿ ನಿರೂಪಿಸಿದ್ದಾರೆ. ಇಲ್ಲಿ ಮಾತ್ರ ಕನ್ನಡ ಟೀಕೆ ಇದೆ.

27. ಕೌತುಕ ನಿಧಿ, ಚಾಮುಂಡೇಶ್ವರೀಚ್ಛದ ಗಂಜೀಫ ಕ್ರೀಡಾ : ಮೊಧಲಿಗೆ ಸಂಸ್ಕೃತ ಪದ್ಯಗಳಲ್ಲಿ ಈ ಆಟದ ಕ್ರಮವನ್ನು ಹೇಳಿರುತ್ತಾರೆ. ಅದರಲ್ಲಿ ಕೊನೆಯ ಪದ್ಯ ಹೀಗಿದೆ:

ಶಕೆ ಶಾಲಿವಾಹನಸ್ಯ ಜಗಟೇಂದು ಮಿತೇಶುಧೇ ಆಷಾಢೇ ಚಿತ್ರಭಾನೋಸ್ತು ಶುಕ್ಲೇಕಾದಶತೇರವೌ ॥

ಕೃಷ್ಣರಾಜ ಮಹೇಂದ್ರೇಣಿ ಚಾಮುಂಡಾಪೇಟಿಕಾ ಕೃತಾ ॥

ಟೀಕು : ಈ ಚಾಮುಂಡೇಶ್ವರೀ ಗಂಜೀಫಿಗೆ ಬಾಜುಗಳು 16ಕ್ಕೆ ಒಟ್ಟು ಎಲೆಗಳು 320ಕ್ಕೆ (1) ಚಾಮುಂಡೇಶ್ವರೀಬಾಜು 1ಕ್ಕೆ 18 ಎಲೆಗಳು ಚಿನ್ನದ ಬಣ್ಣ (2) ವಿಷ್ಣುಬಾಜು 1ಕ್ಕೆ 18 ಎಲೆಗಳು. ಇಮಗಲೀಕದ ಬಣ್ಣ 3) ಈ ಮೇಲೆ ಬಾಜುಗಳು 16ಕ್ಕೆ ಎಲೆಗಳು 288. ಚೂಟ ಚಕ್ರವರ್ತಿಗಳ ಎಲೆಗಳು 25ಕ್ಕೆ (1) ಮಹಾಕಾಳೀ 1) ಮಹಾಲಕ್ಷ್ಮೀ, ಒಟ್ಟು ಈ 25 ಎಲೆಗಳಿಗೂ ಇಂಗಲೀಕದ ಬಣ್ಣ, ಚಾಮುಂಡೇಶ್ವರೀ ಮೀರಾ ಬಂದವರ ಆಟವೆ ಮೊದಲಾದವುಗಳಿಂದ ಚಾಮುಂಡೇಶ್ವರಿ ಹುಕುಮಿಗೆ ಕೊಡತಕ್ಕ ಇಂಗಳೀಕದ ಬಣ್ಣವುಳ್ಳ ಹಂಸ ಎಲೆಗಳು.

ಒಟ್ಟು 320 ಎಲೆಗಳ ಈ ಗಂಜೀಫಿನಲ್ಲಿ ಚಕ್ರವರ್ತಿಗಳು ವೋಕ್ತ್ಯಾರಿ ಹುಕುಂ ಆದ್ದರಿಂದ ಅವುಗಳನ್ನು ಮೊದಲು ಇಳಿದುಕೊಳ್ಳಬೇಕು ॥ ಬಾಜು ಜೋಡಿಸುವ ಕ್ರಮ : ರಾಜಾ–ರಾಣಿ–ರಥ–ವಜೀರ–ಪದಾದಿ–ಧ್ವಜ । ಚಾಮುಂಡೇಶ್ವರೀ ಬಾಜುವಿಗೆ ಮಾತ್ರ ರಾಣಿಸ್ಥಾನಕ್ಕೆ ಸಿಂಹವಾಹಿನೀ । ಇವು ಹುಕುಂನ ಎಲೆಗಳು ॥ ಮೇಷಾದಿ ಮೀನ ಪರ್ಯಂತ ರಾಶಿಗಳನ್ನು ಬರೆದು ಆಯಾ ಭಾಜುವಿನ ವಿಗ್ರಹಗಳ ಗುರುತುಗಳನ್ನು ಬರೆದು ಇರುವ ಖರ್ಚೆ ಎಲೆಗಳು ॥ ಈ ಮೇರೆ 16 ಬಾಜುಗಳನ್ನು

ಜೋಡಿಸಿಕೊಂಡು ಮೊಗಲಾಯಿ ಗಂಜೀಫಿನ ಮೇರೆಗೆ ತಲಬಾತಲಾಬಿ ನಾತವಾನಿ ಲೇತವಾನಿ ಮುಂತಾದ್ದು ಮಾಡುತ್ತಾ ಬರುವುದು. ಹಂಸ ಎಲೆಯು ಯಾರ ಬಳಿಯಲ್ಲಿ ಬಂದು ಇರುತ್ತದೆಯೋ, ಅವರಿಗೆ ಹಂಸ ಎಲೆಯು ಬಾರದೇ ಇದ್ದವರು ಯತಿಗೆ ಯತಿಯನ್ನು ಕೊಟ್ಟು ಹಂಸ ಎಲೆಯನ್ನು ಬಾಜು ತೆಗೆದುಕೊಂಡು ಮೊದಲು ಚಾಮುಂಡೇಶ್ವರೀ ಮೀರಾಕ್ಕೆ ಕೊಡಬೇಕು. ಬಾಜು ಕೊಡತಕ್ಕವರಿಗೆ ಮೀರಾ ಇದ್ದಾಗ್ಯೂ, ಕೊಡತಕ್ಕ ಬಾಜುವನ್ನು ಕೊಡಬೇಕು.

ಬಾಟಾಣಿ ಮಾಡುವ ವಿವರ : ಜನಗಳು 4ಕ್ಕೆ ಜನ 1ಕ್ಕೆ ದಸ್ತು 1ಕ್ಕೆ ಎಲೆಗಳು 4 ರಲ್ಲೂ ದಸ್ತು 20ಕ್ಕೆ 80 ಎಲೆಗಳ ಮೇರೆಗೆ ಹಂಚಿಕೊಂಡು, ಆಖೈರು ಮೋಹಿನೀ ಬಾಜುವಿನಲ್ಲಿ, ಆಖೈರು ಮೀನು ಇರುವ ಎಲೆಯನ್ನು ಆಖೈರು ಯಾರು ಹುಕುಂ ಇಳಿಯುತ್ತಾರೋ, ಅವರ ಆಟ ಗೆದ್ದು ಮಿಕ್ಕಾದವರ ಆಟ ಖಿಲಾಲೆಂಬುದಾಗಿ ಬುದ್ಧಿವಂತರು ನಿಷ್ಕರ್ಷೆಯನ್ನು ಮಾಡಿಕೊಂಡಾಡಬೇಕು.

2. ಅಥ ಜಗನ್ಮೋಹನಚ್ಛದ ಕ್ರೀಡಾ ಕ್ರಮ ಕ್ರಮ ವಿವರಣಮ್ (ಜಗನ್ಮೋಹನ ಗಂಜೀಫ) :

ಈ ಗಂಜೀಪು ಬಾಟಣಿ ಮಾಡುವ ವಿವರ : ಜನಗಳು 4ಕ್ಕೆ 90 ರಲ್ಲು. ಆನ 1ಕ್ಕೆ ಅವ್ವಲ ಆಖೈರ ದಸ್ತು ಮಾತ್ರದಲ್ಲಿ ಎಲೆಗಳು... 1. ಆನಗಳು 5ಕ್ಕೆ ಬಾಟಣಿ ಮಾಡುವ ವಿವರ :

ಈ ಮೇರೆ ಎಷ್ಟು ಜನಗಳು ಆಡಬೇಕಾದರೂ ಜನಕ್ಕೆ ಸರಿಯಾಗಿ ಹಂಚಿಕೊಂಡು 4 ಜನಗಳು ಆಡುವಲ್ಲಿ ಲೀಲಾ ಶುಕ ಎಂಬುದಾಗಿ ಬರೆದಿರುವ ಚಿನ್ನಬಣ್ಣದ ಗಿಣಿಯಲೆಗಳನ್ನು ಚಕ್ರವರ್ತಿ ಎಲೆಗಳಿಗೆ ಸೇರಿಸಿ 29 ಚಕ್ರವರ್ತಿಗಳನ್ನು ಮಾಡಿ ಕೊಂಡು ಗಿಣಿ ಜಲೆಯಲ್ಲಿ ಮೋಹಿನಿಯು ಕೂತುಕೊಂಡು ಇಕ್ಷುಚಾಪ ಪುಷ್ಪ ಶರಗಳಿಂದ ಗರುಡನನ್ನು ಭೇದಿಸುವಂತೆ ಬರೆದಿರುವ ಎಲೆಯನ್ನು ಆಖೈರು ಹುಕುಮಾಗಿ ಯಾರು ತಿಳಿಸುತ್ತಾರೋ ಅವರ ಆಟ ಗೆದ್ದು ಮಿಕ್ಕವರ ಆಟ ಖಿಲಾಲೆಂಬುದಾಗಿ ತಿಳಿಯುವುದು.

3. ನವೀನ ದಶಾವತಾರಚ್ಛದ ಕ್ರೀಡನಮ್, 4. ನವಗ್ರಹಚ್ಛದ, 5. ಪಂಚಪಾಂಡವಚ್ಛದ, 6. ದೇವೀದಶಾವತಾರಚ್ಛದ, 7. ದಿಕ್ಪಾಲಚ್ಛದ 8. ಮನೋಹರಚ್ಛದ 9. ಸಮ್ಮಂಗಳಾ, 10. ನವರತ್ನ, 11. ಕೃಷ್ಣರಾಜಚ್ಛದ (ಈ ಆಟವನ್ನು ಮುಮ್ಮಡಿಯವರು ತಮ್ಮ ಸ್ವಂತ ಹೆಸರಿನಲ್ಲಿಯೇ ಮಾಡಿದ್ದಾರೆ) 12. ಸಂದ್ಯೋಜಾತಾದಿಚ್ಛದ ನವೀನರಾಮ.

13. ಷೋಡಶ ಮುಖಾಪನೇಕ್ಷ ಕ್ರೀಡಾ . 16. ಮುಖಿದ ಪಗಡೆಯ ಆಟ :

ಶಲಿವಾಹಕಶಸ್ಯಾಬ್ದೇಷ ಜ್ಞ್ಯಥೆಂದು ಮಿತೇಶುಭೇ ॥ 1754
ಖರವರ್ಷೇ ಕೃಷ್ಣಪಕ್ಷೇ ತ್ರಯೊದಶ್ಯಾಂ ರವೌ ಶಂಭೇ ।
ಶ್ರೀ ಚಾಮುಂಡಾ ಕೃಪಾಪೂರ್ಣ ಕೃಷ್ಣರಾಜ ಮಹೀಭುಜಾ
ನಿರ್ಮಿತಾ ಷೋಡಶ ಮುಖಾಕ್ಷ ಕ್ರೀಡಾಟ ಮನೋಹರಾ ॥

14. ಅಷ್ಟಮುಖಾಸನೇಕ್ಷ ಕ್ರೀಡಾ, 15, ಷಣ್ಮುಖಾಸನೇಕ್ಷ. 16. ಬುರಜಾಶ್ಯು ಕೊಷ್ಟ ವಿಶೇಷ ವರಕ್ಷಕ್ರೀಡಾ (ಭುರಜು ಪಗಡೆ ಆಟ)

ಶಾಲಿವಾಹನಶಕಸ್ಯಾಬ್ದೇ ಮವಥೇಂದು ಮಿತೇಶುಭೇ 1755
ನಂದನಾಷಾಢ ಶುಕ್ಲಸ್ಯತ್ವೇಕಾದ ಶ್ಯಾಂ ರವೋರ್ದಿನೇ
ಶ್ರೀ ಚಾಮುಂಡಾ ಕೃಪಾಪೂರ್ಣ ಕೃಷ್ಣರಾಜ ಮಹೀಪತಿಃ
ಬುರಜ್ಜಕ್ಷ ಕ್ರೀಡಾನಸ್ಯ ಪ್ರಕಾರಂ ವ್ಯವಣೋರ್ತ್ಸ್ವಯಂ

17. ನವಗ್ರಹಹಾಕ್ಷ : 18. ಭೂಚಕ್ರದ ಪಗಡೆ : 19. ಚಕ್ರದ ಪಗಡೆ ಆಟ :

20. ಹಸ್ತಿಬಂಧನ ಕ್ರೀಡೆ : ಆನೆಕಟ್ಟಿನ ಆಟ

ಅಷ್ಟಕೋಣಂ ಸ್ಯಾತ್ತು ಪಂಚಾಶಿತ – ಕೌಷ್ಟೈರ್ಯುಶಂತತಃ
ವ್ಯಾಧಾಸ್ಯು ರಷ್ಟಾಚಿತ್ವಾರಿಶಂ ಚತ್ವರೋಭವಂತಿಹಿ
ಗಜಾಸ್ತೇಷಾಂ ಗ್ರಹಃ ಕಾರ್ಯೋ ಹಸ್ತ ಗ್ರಾಹಂ ವಿಲಾಸತಃ
ವ್ಯಾದ್ವೆ ಸಂಧಾವೇವಸದಾ ವ್ಯಾಪ್ರಗೃಹವದೀರಿತಮಃ

ಆನೆಗಳ ಕಟ್ಟಿನ ಆಟಕ್ಕೆ ಮನೆಗಳ ಮತ್ತು ಆಳುಗಳ ವಿವರ. ಆನೆಗಳ ಕಟ್ಟಿನ ಆಟಕ್ಕೆ ಅಷ್ಟಕೋಣವಾದ ಮನೆಗಳನ್ನು ಬರೆದು ಅವುಗಳಲ್ಲಿ ಹುಲಿಕಲ್ಲಿನ ಆಟದ ಮನೆಗಳಂತೆ ಮೂಲೆಗಳು ಕೂಡಿದ ಬಳಿ ಹೂವುಗಳನ್ನು ಬರೆದು, ಆ ಹೂವುಗಳನ್ನು ಬರೆದಿರುವ ಮನೆಗಳು 85 ಇರುವಂತೆ ಮಾಡಿ 48 ಆಳುಗಳನ್ನು ಇಟ್ಟುಕೊಂಡು, ಆನೆಗಳು ನಾಲ್ಕು ಇಟ್ಟುಕೊಂಡು, ಹುಲಿ ಕಲ್ಲಿನ ಆಟದಲ್ಲಿ ಹುಲಿಗಳನ್ನು ಹಿಡಿಯುವಂತೆ ಈ ಆಳುಗಳಿಂದ ಆ ನಾಲ್ಕು ಆನೆಗಳನ್ನು ಹಿಡಿಯುವಂತೆ, ಅವರವರ ಬುದ್ಧಿಗೆ ಅನುಸಾರ ನೋಡಿಕೊಂಡು ಆಡುವುದು.

21. ಉದ್ದಿಷ್ಟಾಕ್ಷರ ಪ್ರಕಾಶನಮ್ 22. ಸಂಖ್ಯಾಭಿರ್ಲಿಪ್ಯವ್ಯವಗಮಕ್ರಮಃ ಇದು ತೂಕ, ಅಳತೆ, ಅಕ್ಷರ, ಅಂಕಿಗಳ ವಿಷಯವಾಗಿ ಇದೆ. 23. ಮುಷ್ಟಿ ಪ್ರಶ್ನೇಷು ಹಸ್ತಗ್ರಾಹ್ಯ ಪದಾರ್ಥ ತದುತ್ತರ ವಿಧಯಃ ಇದಕ್ಕೆ ಟೀಕು ಇಲ್ಲ. 24. ಉಪಯುಕ್ತ ಪದಾರ್ಥ ಜ್ಞಾಪಕಗಸಿತ ಸಂಕೇತ ಶ್ಲೋಕಾ । ಕೈಯಲ್ಲಿ ಹಿಡಿದ

ಪದಾರ್ಥಗಳನ್ನು ಹೇಳುವ ಪದ್ಯಗಳು, ಟೀಕು ಇದೆ, 25. ದೇವೀ ಸಾಯುಜ್ಯ ಮುಕ್ತ ಚಿತ್ರಪಟಃ 26. ಚಿತ್ರಪಟ ನಿರ್ಮಾಣ ಪ್ರಕಾರ : ಇದಕ್ಕೆ ಕಂದ ಪದ್ಯ ರೂಪದಲ್ಲಿ ಟೀಕು.

27. ಲಿಂಗಾಕೃತಿ ದೇವೀ ಸಾಯುಜ್ಯ ಮುಕ್ತ್ಯಕ್ಷ ಕ್ರೀಡಾ 28. ಸರ್ಪಾಕೃತಿ ದೇವೀ ಸಾಯುಜ್ಯ ಮುಕ್ತ್ಯಕ್ಷ ಕ್ರೀಡಾ, 29. ವಿಶ್ವರೂಪಾಕೃತೌದೇವೀ ಸಾಯುಜ್ಯ ಮುಕ್ತ್ಯಕ್ಷ ಕ್ರೀಡಾ 30. ದೇವೀ ಸಾಯುಜ್ಯ ಮುಕ್ತ್ಯ.... (ವೃಂದಾವನಾಕೃತೌ ಚಿತ್ರಪಟೀ) 31. ಚತುರಂಗಭೇದ್ಯ ಗರುಡವ್ಯೂಹ ರಚನಾಕ್ರಮ 32. ಏತಸ್ ಚತುರಂಗ ಭೇದಕ್ರಮ.

ಪುಸ್ತಕದ ಕೊನೆಯಲ್ಲಿ ಶ್ರೀ ಶಂಕರಾಚಾರ್ಯರಿಂದ ರಚಿತವಾದ ಸೌಂದರ್ಯಲಹರಿಯಲ್ಲಿ ಹೇಳಿದ ಚಕ್ರ ಲಕ್ಷಣದ ಪದ್ಯವನ್ನು ಉದ್ಧರಿಸಿದ್ದಾರೆ.

ಶ್ರೀ ಚಕ್ರಗ್ರಹ ದೇವತಾ ನಾಮಾನಿ : (ಲಲಿತಾರ್ಚನ ಮಂಜರ್ಯೋ ತ್ರಯೋದಶ ತಬತಾಂತರ್ವರ್ತ್ಯಷ್ಟ ಮಸ್ತಬಕೇ ಜ್ಞಾನಾರ್ಣವೇ) 9 ಪದ್ಯಗಳು.

ಈ ಗ್ರಂಥ ಸಂಗ್ರಹಾತ್ಮಕವಾಗಿದೆ. ಒಂದೊಂದು ನಿಧಿಗೆ ಒಂದೊಂದು ಪುರಾಣಗಳು ಹಾಗೂ ಅಲ್ಲಿಯ ಶ್ಲೋಕಗಳು ಪ್ರಮಾಣರೂಪವಾಗಿ ಉದಾಹರಿಸಲ್ಪಟ್ಟು 18 ಮಹಾಪುರಾಣ ಹಾಗೂ ಉಪಪುರಾಣ, ಮಹಾಭಾರತ, ಭಾಗವತಾದಿ ಪ್ರಮಾಣಗಳು, ಪ್ರಾಚೀನ ಕೃತಿ, ಸ್ಮೃತಿ, ಕಲ್ಪ, ನಿರುಕ್ತಗಳು, ಪಂಚರಾತ್ರ ಮುಂತಾದವುಗಳಿಂದ ಆಯ್ಕೆ ಮಾಡಲ್ಪಟ್ಟಿವೆ. ಗ್ರಂಥ ಭೂಮಿಕೆಯಲ್ಲಿ ಮಹಾಪ್ರಯಾಸದಿಂದ ಸಂಗ್ರಹಿಸಿದ ಗ್ರಂಥವೆಂದು ಹೇಳಲಾಗಿದೆ.

## 9. ಶಕಕಾಲನಿರ್ಣಯ

ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ಇತಿಹಾಸವನ್ನು ಚೆನ್ನಾಗಿ ಬಲ್ಲವರಾಗಿದ್ದರು. ಮುಮ್ಮಡಿಯವರು ಭರತ ಖಂಡದ ಪುರಾತನ ರಾಜರ ಚರಿತ್ರೆಯನ್ನು ಕಾಲ ಗಣನಪೂರ್ವಕವಾಗಿ ರಚಿಸಬೇಕೆಂಬ ಉದ್ದೇಶದಿಂದ ಸೂರ್ಯಚಂದ್ರ ವಂಶಾವಳಿ ಮತ್ತು ಶತಕಾಲ ನಿರ್ಣಯ ಎಂಬ ಗ್ರಂಥಗಳನ್ನು ರಚಿಸಿದ್ದಾರೆ. ಪುರಾಣಗಳಿಂದ ಸೂರ್ಯಚಂದ್ರವಂಶ್ಯರಾದ ರಾಜಪರಂಪರೆಯನ್ನು ತಿಳಿಯುವುದು ಪೌರಾಣಿಕರಿಗೂ ಸುಲಭವಲ್ಲ. ಪರಸ್ಪರ ವಿರೋಧವಿಲ್ಲದಂತೆ ಪುರಾಣಗಳನ್ನು ಪರೀಕ್ಷಿಸಿ ನಿಸ್ಸಂದೇಹವಾಗುವಂತೆ ವಂಶಾವಳಿಯನ್ನು ರಚಿಸಿರುವುದಲ್ಲದೆ, ಶಕಕರ್ತೃಗಳಾದ ರಾಜರನ್ನು ನಿಷ್ಕರ್ಷೆಮಾಡಿ ಶಕಕಾಲವನ್ನು ಮುಮ್ಮಡಿ ಕೃಷ್ಣರಾಜರು ನಿರ್ಣಯಿಸಿರುವರು. ಶಕಕಾಲನಿರ್ಣಯದ ವಿಷಯದಲ್ಲಿ

ಈಚೆಗೆ ಅನೇಕ ಪಾಶ್ಚಾತ್ಯ ವಿದ್ವಾಂಸರು ಚರ್ಚೆ ಮಾಡಿ "ರಾಯಲ್ ಏಷ್ಯಾಟಿಕ್ ಸೊಸೈಟಿಯ" ಪತ್ರಿಕೆಯಲ್ಲಿ ತಮ್ಮ ತಮ್ಮ ಅಭಿಪ್ರಾಯಗಳನ್ನು ಪ್ರಕಟಿಸಿದ್ದಾರೆ. ಐವತ್ತು ವರ್ಷಗಳ ಮುಂಚಿತವಾಗಿಯೇ ಈ ವಿಷಯವು ಮುಮ್ಮಡಿಯವರಿಗೆ ತೋಚಿರುವುದಕ್ಕೆ ಅವರ ಜ್ಯೋತಿಷ ಶಾಸ್ತ್ರ ಜ್ಞಾನವೇ ಕಾರಣವೆಂದು ಡಾ. ಆರ್. ಶಾಮಶಾಸ್ತ್ರಿಗಳವರು ಅಭಿಪ್ರಾಯಪಟ್ಟಿದ್ದಾರೆ.

ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ವಿರಚಿಸಿರುವ ಚತುರಂಗಸಾಗರ ಸರ್ವಸ್ವದಲ್ಲಿ ಚತುರಂಗ ಕ್ರೀಡಯ ವಿಷಯದಲ್ಲಿ ಪಾಂಡಿತ್ಯವಿದ್ದು ಆ ವಿಚಾರದಲ್ಲಿ ಸಂಶೋಧನೆಯನ್ನು ನಡೆಸಿ, ಗ್ರಂಥವನ್ನು ರಚಿಸಿರುತ್ತಾರೆ. ಸನ್ 1976ನೇ ಇಸವಿ ಜುಲೈ ಮಾಹೆಯಲ್ಲಿ ವಿಸಡಂ ಎಂಬ ನಿಯತಕಾಲಿಕೆಯಲ್ಲಿ ಪುಟ. 30ರಲ್ಲಿ ಪ್ರಕಟವಾಗಿರುವುದನ್ನು ವೀಕ್ಷಿಸಿದರೆ.* ಚದುರಂಗ ಕ್ರೀಡೆಯಲ್ಲಿ ಎಷ್ಟು ಆಟಗಳನ್ನು ಆಡಬಹುದು ಎಂದರೆ, 197299 ಪ್ರಾರಂಭದ ನಡಿಗೆಗಳಿಂದ 72 ಸಾವಿರ ವಿವಿಧ ಸ್ಥಾನಗಳನ್ನು ಹೊಂದುತ್ತವೆಯೆಂದೂ ಮತ್ತು ಜ್ಯೋತಿಷ್ಯ ಸಂಖ್ಯಾ ಪ್ರಕಾರ ಆಟಗಾರನು ಆಡಬಹುದಾದ ಆಟಗಳು ಜಗತ್ತಿನಲ್ಲಿ ಎಷ್ಟು ಅಣುಗಳಿವೆಯೋ ಅಷ್ಟೇ ಆಟಗಳನ್ನು ಆಡಬಹುದೆಂದೂ ತಿಳಿಸಲಾಗಿದೆ. ಇದರಿಂದ ಒಂದು ಶತಮಾನದ ಕಾಲದ ಹಿಂದೆಯೇ ಮುಮ್ಮಡಿಯವರಿಗೆ ಚತುರಂಗ ಕ್ರೀಡೆಯ ವಿಷಯದಲ್ಲಿ ಎಷ್ಟು ಪಾಂಡಿತ್ಯವಿತ್ತೆಂದು ನಮಗೆ ಗೋಚರವಾಗುತ್ತದೆ. ವಂಶಾವಳಿಯ ಪ್ರಕಾರ ಮುಮ್ಮಡಿ ಶ್ರೀ ಕೃಷ್ಣರಾಜ ಮಹೀಪಾಲರು ಚದುರಂಗ, ಗಾಂಜೀಫು ಮತ್ತು ಪಗಡೆಯ ಆಟಗಳಲ್ಲಿ ಸಂಶೋಧನೆಯನ್ನು ಮಾಡಿ, ಆ ಕ್ರೀಡೆಗಳಲ್ಲಿ ಎಷ್ಟು ಚಮತ್ಕಾರಗಳನ್ನುಂಟು ಮಾಡಬಹುದು ಎಂಬ ವಿಷಯದಲ್ಲಿ ಹೀಗೆ ತಿಳಿಸಿದ್ದಾರೆ.

ಚದುರಂಗ-ಸಾರಸರಸ್ವವೆಂಬ ಗ್ರಂಥವನ್ನು ರಚಿಸಿ, ಈ ಗ್ರಂಥದಲ್ಲಿ ಅಶ್ವಗತಿ ಚಕ್ರ, ಚಮತ್ಕಾರಗಳನ್ನು ತಿಳಿಯುವುದಕ್ಕೆ ಪೂರ್ವದಲ್ಲಿ ಇದ್ದ 64 ಮನೆ ಚದುರಂಗದ ಮನೆಗೆ ಸರಿಯಾದ ಮೊಹರಿಗಿಂತಲೂ ಅಧಿಕವಾಗಿ ಧ್ವಜರಥಗಳೆಂಬುದಾಗಿ 2 ಮೊರೆಗಳನ್ನು ಉಂಟುಮಾಡಿ ಇರುವ 12 ಮನೆ ಚದುರಂಗಕ್ಕೆ 144 ಮನೆಯೆಂಬುದಾಗಿ ನಿಬಂಧನೆಯನ್ನು ಮಾಡಿ ಇರುವ ಈ ಚದುರಂಗ ಚಕ್ರದಲ್ಲಿ ಪೂರ್ಣಾಶ್ವ ಲಕ್ಷ್ಮೀ ಚಕ್ರವನ್ನೂ, ದೇವತಾ ಆಕಾರಗಳಲ್ಲಿ ಅಷ್ಟೋತ್ತರನಾಮ ಚಕ್ರಗಳನ್ನೂ, ಗಣಪತಿ ಬಾಲಕೃಷ್ಣ ಮೊದಲಾದ ಅನೇಕ ದೇವತಾ ಆಕಾರ ಚಿತ್ರಗಳನ್ನೂ, ಕಲ್ಪವೃಕ್ಷ, ಕಾಮಧೇನು, ಸರೋವರಾಕೃತಿ ಮೃಗಪಕ್ಷಿ ಮೊದಲಾದ ಆಕಾರದಿಂದೊಡಗೂಡಿರುವ ಏಕಾಶ್ವದ್ವ್ಯಾಶ್ವ ಮೊದಲಾಗಿ ಅನೇಕ ಚಿತ್ರಚಮತ್ಕಾರ ಗಳನ್ನು ರಚಿಸಿ ಇರುವ ಚಕ್ರಗಳನ್ನು ಮತ್ತು 64 ಮನೆ ಚಕ್ರದಲ್ಲಿ ವುದ್ದೆಶೋತ್ತರವೆಂಬ

ಚಕ್ರವನ್ನೂ, ಪೂರ್ಣಕಾರಾ ಕಲ್ಪತರು, ಜಗನ್ಮೋಹನ ಚತುಶ್ಯಾರಾ ಮನೋರಂಜನ, ದಂಡಪಾರ್ಶ್ವಕೋಣ ತೆರಿಚು ಬರುವ ಚಕ್ರಗಳು ಮತ್ತು 64 ಮನೆಯಲ್ಲಿ ಎಲ್ಲಿ ಮೊದಲು ಮಾಡಿದಾಗ್ಯೂ, ದಂಡಪಾರ್ಶ್ವಸಮತೇರಿಜು ಬರುವಂತೆಯೂ, ಇನ್ನೂ ಅನೇಕ ಚಮತ್ಕಾರ ಚಕ್ರಗಳನ್ನು ನಿರ್ಮಿಸಿ ಇರುವುದಲ್ಲದೆ 28 ಗಂಜೀಪುಗರ್ಭೀತವಾಗಿರುವ 600 ಎಲೆವುಳ್ಳ ಸಾರಸಂಗ್ರಹಗಂಜೀಫು, ಜಗನ್ಮೋಹನ ಗಂಜೀಫು, ನವೀನ ದಶಾವತಾರಗಂಜೀಫು, ಪಂಚಪಾಂಡವ ಗಂಜೀಫು, ದಿಕ್ಪಾಲಕರ ಗಂಜೀಫು, ಮನೋಹರ ಗಂಜೀಫು, ಸರ್ವಮಂಗಳಾ ಗಂಜೀಫು ಮೊದಲಾದ ಅನೇಕ ಗಂಜೀಫುಗಳನ್ನು ಕೃಷ್ಣರಾಜಪೀಠು, ಸಂದ್ಯೋಜಾತಪೀಠು, ರಾಮಪೀಠು ಮೊದಲಾದ ಪೀಠುಗಳನ್ನೂ 16 ಮುಖಗದ ಪಗಡೆ, 12 ಮುಖದ ಪಗಡೆ, 8 ಮುಖದ ಪಗಡೆ, ಷಣ್ಮುಖದ ಪಗಡೆ, ದೇವಿಸಾಯುಜ್ಯದ ಪಗಡೆ, ಬುರಜಿನಪಗಡೆ, ನವಗ್ರಹಪಗಡೆ, ಶ್ರೀಚಕ್ರ-ಭೂಚಕ್ರ ಪಗಡೆ, ಮುಂತಾದ ಪಗಡೆಗಳಿಗೆ ಥಾಳಚಾರಿ, ನಾನಾ ವರ್ಣದ ಕಾಯಿಗಳು ನಿರ್ಮಿಸಿ ಮತ್ತು ಅನೇಕಕಟ್ಟಿನ ಆಟವನ್ನೂ ವಿಚಿತ್ರವಾಗಿ ಮಾಡಿಸಿದ್ದಲ್ಲದೇ, ಚತುರಶ್ರಾಶ್ರೃತಿಯಾಗಿಯೂ, ಬೃಂದಾವನಾ ಕೃತಿಯಾಗಿಯೂ, ಶಿವಲಿಂಗಾಕೃತಿ ಮೊದಲಾಗಿ, ಅನೇಕ ಕೃತಿಗಳಾಗಿ ಯಥಾಶಾಸ್ತ್ರವಾಗಿ, ದೇವಿಸಾಯುಜ್ಯ, ಜೀವನ್‌ಮುಕ್ತಿ, ಪಠವನ್ನು ನಿರ್ಮಿಸಿ, ಈ ಆಟಕ್ಕೆ ಅಂಕದಿಂದೊಡಗೂಡಿರುವ ಥಾಳವನ್ನುಂಟು ಮಾಡಿ ಮತ್ತು ರಾತ್ರಿ ಅಂಧಕಾರ ಗೃಹದಲ್ಲಿ ದಶಾವತಾರ ಮೊದಲಾದ ಅನೇಕ ವಿಚಿತ್ರ ದರ್ಪಣಪೀಠಗಳನ್ನು, ಸ್ವಲ್ಪ ಬೆಳಕಿನಿಂದ ನೋಡಿದರೆ, ಅತಿ ವಿಸ್ತಾರವಾಗಿ ಕಾಣುವಂತೆಯೂ, ಚಮತ್ಕಾರವಾದ ಆಶ್ಚರ್ಯಚಕ್ರಗಳು, ಚಿತ್ರ ವಿಚಿತ್ರವಾಗಿ ನಾಟ್ಯವನ್ನಾಡುವಂತೆ ಮಾಡಿಸಿ, ಜನಗಳನ್ನು ಸಂತೋಷಪಡಿಸುತ್ತಿದ್ದರು.

ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರು ತಮ್ಮ ಗ್ರಂಥಗಳಲ್ಲಿ ವಿಶ್ಲೇಷಿಸಿಕೊಂಡಿರುವ "ಉಭಯ ಕವಿತಾಲಕ್ಷಣ ವಿಚಕ್ಷಣ... ಸ್ವಯಂವೃತಕವಿತಾ ವಧೂರತ್ನ" ಎಂಬೀ ವಿಶೇಷಣಗಳನ್ನೂ ನಾವು ಶ್ಲಾಘಿಸಬೇಕಾದುದೇ.

ಶೀಲಸ್ಯ ಇವಂ ಶೈಲಿ: ಅರ್ಥಾತ್ ಕವಿಯ ಶೈಲಿಯಿಂದ ಅವನ ಮನೋಧರ್ಮವೇನೆಂಬುದನ್ನು ನಾವು ಸುಲಭವಾಗ ಗ್ರಹಿಸಬಹುದು ಎಂದು ವಿದ್ವಾಂಸರ ಅಭಿಪ್ರಾಯ. ಭರತೇಶ ವೈಭವದಲ್ಲಿ ಕವಿತಾ ಶಕ್ತಿಯೇ ಕಲ್ಪವಲ್ಲಿ, ಎಂದರೆ ಕವಿತೆಯೆಂಬುದು ಕಲ್ಪತರು ಎಂದು ತಿಳಿಸಿದೆ. ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರ ವ್ಯಕ್ತಿತ್ವವನ್ನು ಎಷ್ಟು ಹೊಗಳಿದರೂ ಸಾಲದು.

ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರು ತಮ್ಮ ಕುಲದೇವತೆಯಾದ

ಶ್ರೀ ಚಾಮುಂಡೇಶ್ವರಿಯ ಅಂಕಿತದಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಇವರು ತಮ್ಮ ವಿದ್ವತ್ತಿಗೆ ಎಷ್ಟು ಪ್ರಸಿದ್ಧರೋ, ಹಾಗೆಯೇ ತತ್ವ ಮತ್ತು ಶೃಂಗಾರಗಳಲ್ಲಿಯೂ ಅಷ್ಟೇ ಪ್ರವೀಣರಾಗಿದ್ದರು. ಇವರು ಜಾವಳಿಗಳನ್ನು ನೀಲಾಂಬರಿ, ಕಾಂಬೋದಿ, ಕಮಾಚ್ ರಾಗಗಳಲ್ಲಿಯೂ ರಚಿಸಿರುತ್ತಾರೆ. ಪೂರ್ಣವಿವರಗಳಿಗೆ ಮೇಲಿನ ಗ್ರಂಥಗಳನ್ನು (ಪುಟ 62 ರಿಂದ 67) ಅಧ್ಯಯನ ಮಾಡಬಹುದು.

ಶ್ರೀಮಾನ್ ಕೆ.ವಿ. ಆಚಾರ್‌ರವರು ತಮ್ಮ ಕನ್ನಡದ ಜಾವಳಿಗಳು ಎಂಬ ಗ್ರಂಥದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರವರ ಅಳಿಯಂದಿರಾದ ರಾಜಕವಿ ಅಳಿಯ ಲಿಂಗರಾಜ ಅರಸಿನವರು ರಚಿಸಿರುವ ಜಾವಳಿಗಳನ್ನು ವಿವರಿಸುತ್ತ ಅಳಿಯ ಲಿಂಗರಾಜ ಅರಸಿನವರ ವ್ಯಕ್ತಿತ್ವವನ್ನು ಹೀಗೆ ತಿಳಿಸಿದ್ದಾರೆ: (ಪುಟ 68 ರಿಂದ 75)

ಅಳಿಯ ಲಿಂಗರಾಜ ಅರಸಿನವರ ಕಾವ್ಯಪ್ರೇಮ ಗಾಢವಾದದ್ದು. ಅವರ ಪಾಂಡಿತ್ಯಕ್ಕೂ, ಕವಿತಾ ಪ್ರೌಢಿಮೆಗೂ ಹಾಗೂ ನಾಟಕ ರಚನಾ ಕೌಶಲ್ಯಕ್ಕೂ, ಕಲಾಪ್ರೋತ್ಸಾಹಕ್ಕೂ ಮಹಾಸ್ವಾಮಿಯವರು ಅವರಿಗೆ ಉಭಯಕವಿತಾ ವಿಶಾರದ, ಅಭಿನವ ಭೋಜ ಎಂದು ಬಿರುದು ಕೊಟಿದು ಸಂತೋಷದ ಸಂಗತಿ. ಇವರು ಕನ್ನಡ ಸರಸ್ವತಿಯ ಭಂಡಾರವನ್ನು ಬಹುಮುಖವಾಗಿ ಪುಷ್ಟಿಗೊಳಿಸಿದರು. ಚಂಪೂ, ಸಾಂಗತ್ಯ, ಹಾಡು, ಲಾವಣಿ, ಯಕ್ಷಗಾನ ನಾಟಕಗಳ ಕೃತಿಗಳನ್ನು ಬಹುವಾಗಿ ರಚಿಸಿದರು. ಕೆಲವು ನಾಟಕ ಲೇಖಕರಿಗೂ, ನಾಟಕಾಭಿನಯಕ್ಕೂ ನಟನಟಿಯರಿಗೂ ತುಂಬಾ ಪ್ರೋತ್ಸಾಹ ಕೊಟ್ಟು ಬೆಳೆಸಿದರು. ಎಂದು ತಿಳಿಸಿ ಮುಂದುವರಿಸುತ್ತಾ, ಇವರ ಗಿರಿಜಾಕಲ್ಯಾಣ, ಸೀತಾಕಲ್ಯಾಣ, ನಲಚರಿತ್ರೆ, ಬಬ್ರುವಾಹನಕಾಳಗ, ಮೊಡಿ ನಾಟಕ, ಸುಭದ್ರಾ ಕಲ್ಯಾಣ, ಕರ್ಣಪರ್ವ, ಪುತ್ರಕಾಮೇಷ್ಠಿ ಮುಂತಾದವನ್ನು ಕನ್ನಡ ನಾಡಿನ ಅನೇಕ ಸ್ಥಳಗಳಲ್ಲಿ ಅಭಿನಯಿಸುತ್ತಿದ್ದರು, ಇವರೂ ಸಹ ಅನೇಕ ಶೃಂಗಾರಭರಿತ ಹಾಡುಗಳನ್ನು ಲಿಂಗರಾಜ ಎಂಬ ಅಂಕಿತದಿಂದ ರಚಿಸಿದ್ದಾರೆ.

## ಉಪಸಂಹಾರ

ಮುಮ್ಮಡಿ ಕೃಷ್ಣರಾಜ ಒಡೆಯರು ಕನ್ನಡ ಸಾಹಿತ್ಯದಲ್ಲೊಂದು ಸಂಧಿಕಾಲವನ್ನು ಪ್ರತಿನಿಧಿಸುತ್ತಾರೆ ಇವರ ಕಾಲದಲ್ಲಿ ರಚನೆಗೊಂಡ ವಾಙ್ಮಯ ರಾಶಿಯಲ್ಲಿ ಪ್ರಾಚೀನವಾದದ್ದು ಹಾಗೂ ನವೀನವಾದದ್ದು ಆಗಾಧವಾಗಿದೆ ಆದರೆ ಹೊಸದರ ಕೆಲವು ಬೀಜಗಳು ಅದರಲ್ಲಿ ಉದುಗಿವೆ ಎಂಬುದು ಸತ್ಯದ ಸಂಗತಿ. 20ನೆಯ ಶತಮಾನ ಕನ್ನಡ ಸಾಹಿತ್ಯದ ನವೋದಯಕಾಲ, ಅದರೆ ಇದರ ಹಿನ್ನೆಲೆ 19ನೇ

ಶತಮಾನದಲ್ಲೆ ಮುಮ್ಮಡಿಯವರು ಇದಕ್ಕೆ ಬೇಕಾದ ಎಲ್ಲಾ ಆಯಾಮಗಳನ್ನು ಸಿದ್ಧಾಪಸಿದ್ಧಾರೆಂಬುದು ನಿಜಕ್ಕೂ ಸ್ಮರಣೀಯ. ಯಾವಾಗಲೂ ಸೂರ್ಯೋದಯಕ್ಕೆ ಮುನ್ನ ಉಷಃ ಕಾಲವೊಂದಿರುತ್ತದೆ, ಅದರೆ ಅದು ಯಾರನ್ನು ಎಚ್ಚರಿಸುವಷ್ಟು ಪ್ರಖರವಾಗಿರುವುದಿಲ್ಲ, ಆದರೆ ಮುಂದಿನ ದಿನಕ್ಕೆ ಅದರ ಬೆಳವಣಿಗೆಗೆ ಅದೇ ನಾಂದಿ.

ಮುಮ್ಮಡಿಯವರ ಆಳ್ವಿಕೆಯ ಕಾಲದಲ್ಲಿ ಇಂತಹ ಉಷಃ ಕಾಲವನ್ನು ಸ್ಫುಟವಾಗಿ ಗುರುತಿಸಬಹುದು. ಆಧುನಿಕ ಗದ್ಯದ ಹಾಗೂ ಕಾವ್ಯದ ದೃಷ್ಟಿಯಿಂದ ವಿಶೇಷ ಮಹತ್ವ ಪಡೆದುಕೊಂಡಿವೆ. ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ ಸಾಹಿತ್ಯ ಸುಗ್ಗಿಯೇ ನಡೆದು ಹೋಯಿತು. ಪ್ರಾಯಶಃ ಮತ್ತಾವ ರಾಜರ ಆಸ್ಥಾನದಲ್ಲೂ ಇಷ್ಟೊಂದು ಪ್ರಮಾಣದಲ್ಲಿ ಸಾಹಿತ್ಯದ ಸುರಿಮಳೆ ಅಗಿರಲಕ್ಕಿಲ್ಲ. ಗದ್ಯ, ಚಂಪೂ, ಷಟ್ಪದಿ, ರಗಳೆ, ಯಕ್ಷಗಾನ, ಶತಕ ಹಾಡು, ಶಾಸ್ತ್ರ, ಆಟೋಟಗಳು ಇವೇ ಮುಂತಾದ ಸರ್ವಪ್ರಕಾರಗಳು ಮುಮ್ಮಡಿಯವರ ಆಸ್ಥಾನಕ್ಕೆ ಭೂಮಿಕೆಯಾಗಿತ್ತು.

ಮುಮ್ಮಡಿಯವರ ಆಸ್ಥಾನದಲ್ಲಿ ಬ್ರಾಹ್ಮಣ, ವೀರಶೈವ, ಜೈನ ಮುಂತಾದ ಎಲ್ಲ ಧರ್ಮಗಳ ಕವಿಗಳು ಸ್ಥಾನಮಾನಗಳನ್ನು ಪಡೆದುಕೊಂಡಿದ್ದರೆಂಬುದು ನಿಜಾಂಶ. ಇದು ಅವರ ಹೃದಯ ವೈಶಾಲ್ಯಕ್ಕೆ ಅಸಂಕುಚಿತ ನಿಲುವಿಗೆ ಜ್ಯೋತಕವಾಗಿದೆ. ಇವರ ಕಾಲದಲ್ಲಿ ಯಕ್ಷಗಾನ ಕೃತಿಗಳ ಮಹಾಪೂರವೇ ಹರಿದಿತ್ತು. ಯಕ್ಷಗಾನವನ್ನಾಡುವುದಕ್ಕೆ ಅರಮನೆಯು ರಂಗ ವೇದಿಕೆಯೇ ಸೃಷ್ಟಿಯಾಗಿತ್ತು. ಇದಕ್ಕಾಗಿ ನಾಟಕ ಸಂಘವನ್ನೇ ಮುಮ್ಮಡಿಯವರು ಭೂಮಿಕೆಯಾಗಿ ನಿರ್ಮಿಸಿದ್ದರು. ಅಷ್ಟೇ ಅಲ್ಲದೆ ಧರ್ಮಸ್ಥಳದಿಂದ ಒಂದು ಯಕ್ಷಗಾನ ಮೇಳವನ್ನು ಮೈಸೂರಿಗೆ ಕರೆಸಿಕೊಂಡು, ಅದರ ಮಹತ್ವವನ್ನು ಹೆಚ್ಚಿಸಿದರಂತೆ. ಇದರಿಂದ ಒಡೆಯರಿಗಿದ್ದ ಕಲಾಭಿಮಾನ ಉಳಿದವರಿಗೆ ಮಾದರಿಯಾಗಿದೆ.

ಕನ್ನಡ ನಾಟಕ ಸಾಹಿತ್ಯದ ಮೊದಲಿಗರಲ್ಲಿ ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳು ಬಾಲ್ಯದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ್‌ರ ಆಶ್ರಿತರಾಗಿದ್ದಾರೆಂಬುದು ಸತ್ಯದ ಸಂಗತಿ. ಕನ್ನಡ ನಾಟಕ ಕ್ಷೇತ್ರದೊಡನೆ ಮುಮ್ಮಡಿಯವರಿಗಿದ್ದ ಅಭಿಮಾನ, ಪ್ರೋತ್ಸಾಹ ಹೇಳತೀರದು. ಒಟ್ಟಿನಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲ ಕನ್ನಡ ಸಂಸ್ಕೃತ ಸಾಹಿತ್ಯದ ಬೆಳವಣಿಗೆಯಲ್ಲೊಂದು ಅದ್ವಿತೀಯವಾದ ಘಟ್ಟ, ಸಾಹಿತ್ಯ, ಸಂಸ್ಕೃತಿ ಚರಿತ್ರೆಯಲ್ಲೊಂದು ಗಣನೀಯವಾದ ತಿರುವು. ಇಂತಹ ಶ್ರೇಷ್ಠ ದೂರದೃಷ್ಟಿಯ ಸವಿಸ್ತಾರವಾದ ಅಧ್ಯಯನ ಸಂಶೋಧಕರಿಂದ ಮತ್ತಷ್ಟು ನಡೆಯಬೇಕಾಗಿದೆ. ಕರ್ನಾಟಕದ ದೊಡ್ಡ ಕೊರತೆಯೆಂದರೆ ಇಂತಹ ಸ್ವಸ್ವರೂಪದ ಎಚ್ಚರ ನಿಚ್ಚಳವಾಗಿ ಮೂಡಿಬಂದಿಲ್ಲ. ಮೋಡ ಮತ್ತು

ಮಿಂಚು ಆದರೆ ಗುಡುಗು ಹೆಚ್ಚು, ಮಳೆ ಕಡಿಮೆ ಎಂಬ ಕವಿ ದ.ರಾ ಬೇಂದ್ರೆಯವರ ಮಾತು ಉಲ್ಲೇಖನೀಯ.

ಅಂತಿಮವಾಗಿ ಮುಮ್ಮಡಿಯವರು ಆಡಳಿತದಲ್ಲಿ ಕಾಣದ ಸುಖವನ್ನು, ಸಾಹಿತ್ಯದ ರಚನೆಯಲ್ಲಿ ಕಂಡರು. ಇವರನ್ನು ಕನ್ನಡ ಜನತೆ ಎಂದೆಂದಿಗೂ ಮರೆಯಲಾರರು. ಇವರ ಪ್ರಜಾವತ್ಸಲ್ಯತೆ, ಕಾಲಾಭಿಜ್ಞತೆ, ಔದಾರ್ಯ ಇವೇ ಮುಂತಾದ ಆದರಣೀಯ ಗುಣಗಳಿಂದ ಮುಮ್ಮಡಿಯವರು ಕನ್ನಡ ನಾಡಿನ ಸಾಹಿತ್ಯ ಸಹೃದಯರ ಹೃದಯ ಸಿಂಹಾಸನದಲ್ಲಿ ಸಹ ವಿರಾಜಮಾನರಾಗಿದ್ದಾರೆ ಎಂಬುದಂತು ಸತ್ಯ. ಮೈಸೂರು ಮಹಾಸಂಸ್ಥಾನವೇ ಒಂದು ಅದ್ಭುತ ಶಕ್ತಿ, ಉಳಿದ ರಾಜ್ಯಗಳಿಗೆ ಮಾದರಿ. ಇಂತಹ ಸರ್ವಶ್ರೇಷ್ಠ ಮೈಸೂರಿನ ರಾಜಮನೆತನ ಇದರ ಇತಿಹಾಸ ಪರಂಪರೆ ಒಂದು ವಿಸ್ಮಯವೆಂದೇ ಹೇಳಬೇಕು. ದಕ್ಷಿಣ ಕರ್ನಾಟಕದ ಗಂಗರು, ಹೊಯ್ಸಳರಂತೆ ಮಯಸೂರು ಒಡೆಯರದೂ ಗಣ್ಯವೂ ಉನ್ನತವೂ ಆದ ರಾಜವಂಶವೂ ವಿಜಯನಗರದ ಪರಂಪರೆ ಸಂಪ್ರದಾಯಗಳನ್ನು ಸಮರ್ಥವಾಗಿ ಮುಂದುವರಿಸಿದ ಆರು ಶತಮಾನಗಳ ಈ ಚರಿತ್ರೆ ಸುದೀರ್ಘವಾದದ್ದು. ಸಂಸ್ಕೃತಿ ಸಂಪನ್ನವಾದದ್ದು, ರಣಧೀರರಂಥ ಪ್ರಚಂಡ ಪರಾಕ್ರಮಿ, ಚಿಕ್ಕದೇವರಾಜರಂಥ ಧ್ಯೇಯಸಾಧಕ ದಕ್ಷಪ್ರಭು. ಮುಮ್ಮಡಿ ಕೃಷ್ಣರಾಜರಂಥ ಸಾಹಿತಿ–ಸಂಗೀತ ಸಾಹಿತ್ಯ ಪೋಷಕರು, ಚಾಮರಾಜೇಂದ್ರರಂಥ ಹೊಸ ಯುಗದ ಹರಿಕಾರ. ನಾಲ್ವಡಿ ಕೃಷ್ಣರಾಜರಂಥ ಸಾಹಿತಿ–ಸಂಗೀತ ಸಾಹಿತ್ಯ ಪೋಷಕರು. ಚಾಮರಾಜೇಂದ್ರರಂಥ ಹೊಸ ಯುಗದ ಹರಿಕಾರ. ನಾಲ್ವಡಿ ಕೃಷ್ಣರಾಜರಂಥ ಪ್ರಗತಿಪರ ಅರಸು ಜಯಚಾಮರಾಜರಂಥ ತತ್ವಶಾಸ್ತ್ರಜ್ಞರು. ಈ ಮನೆತನದ ಕೀರ್ತಿ ಪ್ರತಿಷ್ಠೆಗಳನ್ನು ಇಮ್ಮಡಿಗೊಳಿಸಿದ್ದಾರೆ.

ಯದುಕುಲದ ಅರಸರಿಗೆ, ಯದುವಂಶಕ್ಕೆ ಇದು ಶ್ರೀವಾಣಿಯಗಿದೆ ಎಂಬುದನ್ನು ಮರೆಯಲಾಗದು. ಜಯಜಯ ಎಂಬರು, ಬೆಳೆಬಾಳೆಂಬರು. ನಿನ್ನದು ಕನ್ನಡದೆದೆಯೇವೆಂಬರು– ಮಂಗಳ ಮಸಗಿತು. ಮೈಸೂರರಮನೆ ಧನ್ಯತೆ ಪಡೆಯಿತು. ಮೈಸೂರು ಕನ್ನಡ ನಾಡಿನ ಮನ್ನಣೆ ಪಡೆಯಿತು. ನಾಲ್ವಡಿ ಕೃಷ್ಣರಾಜರ ಮೈಸೂರು "ಅಭಿನವಭೋಜ"ರೆಂಬ ಬಿರುದಾಂಕಿತರಾದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ಸೇವೆ ಉಳಿದವರಿಗೆ ಮಾದರಿ, ಇವರ ದೂರದೃಷ್ಟಿಯ ಗುಣವನ್ನು ಅರಿತುಕೊಂಡು ಯುವ ಪೀಳಿಗೆ ಮುನ್ನಡೆಯಬೇಕಾಗಿದೆ. ರಾಜರು ಮೋಜಿಗಾಗಿ ಸೀಮಿತರಲ್ಲ, ಭವ್ಯ ಭಾರತ ನಿರ್ಮಾಣದ ಹಾಗೂ ಕನ್ನಡ ಸಾರಸ್ವತ ಲೋಕದ ಪುನರುತ್ಥಾನದ ಶಿಲ್ಪಿಗಳು ಎಂಬುದನ್ನು ಮುಮ್ಮಡಿಯವರು ಮುಂದಿನ ಪೀಳಿಗೆಗೆ ಬದುಕು ಸಾಧನೆಯ ಮೂಲಕ ತೋರಿಸಿ ಕೊಟ್ಟು ದಾರಿದೀಪವಾಗಿದ್ದಾರೆ.

* * * * *

# ಪರಾಮರ್ಶನ ಗ್ರಂಥಗಳು

1. ಕರ್ನಾಟಕ ಚರಿತ್ರೆ – ಸಂಪುಟ 7
ಪ್ರೊ. ಬಿ. ಷೇಕ್ ಅಲಿ ಮತ್ತು ಪ್ರೊ. ಎಸ್. ಚಂದ್ರಶೇಖರ್ – 1917

2. ಕರ್ನಾಟಕ ಪರಂಪರೆ – ಸಂಪುಟ 6
ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು – 1992

3. ಸಮಗ್ರ ಕರ್ನಾಟಕ ಚರಿತ್ರೆ – ಹೆಚ್.ವಿ. ಶ್ರೀನಿವಾಸಮೂರ್ತಿ, ಆರ್. ರಾಮಕೃಷ್ಣನ್ – 1997

4. ಶಿವಪುರ ಧ್ವಜ ಸತ್ಯಾಗ್ರಹ – ಡಿ. ಲಿಂಗಯ್ಯ – 1995

5. ಮೈಸೂರಿನ ದಿವಾನರುಗಳು – ಸಂಪುಟ 4 ಡಿ.ವಿ.ಜಿ. – 1999

6. ನಾಲ್ವಡಿ ಕೃಷ್ಣರಾಜ ಒಡೆಯರ್ – ಒಂದು ದರ್ಶನ – ಡಾ. ಪಿ.ವಿ. ನಂಜರಾಜ ಅರಸು ಮತ್ತು ಪ್ರೊ. ಎಸ್.ಆರ್. ಚಂದ್ರರಾಜ ಅರಸು

7. ನಾಲ್ವಡಿ ಕೃಷ್ಣನ ಮೈಸೂರು – ಶ್ರೀನಾರ್ಥ – 1939

8. ಮೈಸೂರು ಶ್ರೀಮನಮ್ಹಾರಾಜ – ಶ್ರೀ ಕೃಷ್ಣರಾಜ – ಶ್ರೀ ಕೃಷ್ಣರಾಜ ಒಡೆಯರು ಬಹದ್ದೂರು ಇವರ ಭಾಷಣ ಪ್ರೆಸ್, ಮೈಸೂರು

9. ಮೈಸೂರು ಸಂಸ್ಥಾನದ ಸ್ವಾತಂತ್ರ ಚಳುವಳಿ – ಕೆ. ವೀರತಪ್ಪ – 1977

10. ಕರ್ನಾಟಕ ಹಿಂದುಳಿದ ವರ್ಗಗಳ ಎರಡನೆಯ ಆಯೋಗದ ವರದಿ – ಸಂಪುಟ – 1 1986

11. ಮನುಸ್ಮೃತಿ, ಮನಂಥರ್ಮ ಶಾಸ್ತ್ರದ ಸಮಗ್ರ ಅನುವಾದ: ಮೂಲ ಶ್ಲೋಕಸಹಿತ ಶ್ರೀಮಾನ್ ವಿದ್ವಾನ್ ಚಕ್ರಕೋಡಿ ಈಶ್ವರಶಾಸ್ತ್ರಿ

12. ಶ್ರೀ ಕಾಳಿಕಾಪುರಾಣ, ಮಹಾಋಷಿ ವೇದವ್ಯಾಸ ವಿರಚಿತ, ಅನುವಾದ: ಹಾಸನ ಪಂಡಿತ ಶ್ರೀಮಾನ್ ವೆಂಕಟರಾಯರು.
13. ಸೋಮೇಶ್ವರ ಶತಕ : ಕವಿ ಸೋಮನಾಥ
14. ಕೌಟಿಲ್ಯ ಅರ್ಥಶಾಸ್ತ್ರ, ಕೌಟಿಲ್ಯ ಅನುವಾದ: ಶ್ರೀ ಕೂಡಲಿ ಶೃಂಗೇರಿ ಜಗದ್ಗುರು ಶ್ರೀ ಸಚ್ಚಿದಾನಂದ ಶಂಕರ ಭಾರತಿ ಸ್ವಾಮಿಗಳು.
15. ಕರ್ನಾಟಕ ಕವಿ ಚರಿತ್ರೆ : ಶ್ರೀಮಾನ್ ಆರ್. ನರಸಿಂಹಚರ್.
16. ರಾಜಾವಳಿ ಕಥಾಸಾರ : ಕವಿ ದೇವಚಂದ್ರ
17. ಪಾಳೇಗಾರರು, ಐದು ಉಪನ್ಯಾಸಗಳು : ಶ್ರೀಮಾನ್ ಎಂ.ಎಸ್. ಪುಟ್ಟಣ್ಣ
18. ಕಂಠೀರವ ನರಸರಾಜ ವಿಜಯ – ಕವಿ ಗೋವಿಂದವೈದ್ಯ : ಸಂ. ಡಾ. ಆರ್. ಶಾಮಾಶಾಸ್ತ್ರೀ, ಅರ್ಥಶಾಸ್ತ್ರ ವಿಶಾರದ ವಿದ್ಯಾಲಂಕಾರ
19. ಚಿಕ್ಕದೇವರಾಯ ವಂಶಾವಳಿ : ಮಂತ್ರಿ ತಿರುಮಲಚಾರ್ಯ, ಶ್ರೀಮಾನ್ ನರಸಿಂಹಾಚಾರ್ ಹಾಗೂ ಎಂ.ಎ. ರಾಮಾನುಜಾ ಐಯ್ಯಂಗಾರ್ ಅವರುಗಳಿಂದ ಪರಿಷ್ಕೃತವಾಗಿದೆ.
20. ರಾಜರು ಮತ್ತು ರಾಜ್ಯಗಳು : ಶ್ರೀ ರಾಣಸಾರೆ, ಅನುವಾದಕರು ಶ್ರೀ ಹೆಚ್.ಬಿ. ಭುಜಂಗಚಾರ್ಯ ಮತ್ತು ಡಾ. ವಿ.ಎಸ್. ಸಂಪತ್ ಕುಮಾರ್ ಆಚಾರ್ಯ.
21. ವಂಶರತ್ನಾಕರ : ಎಂ.ವಿ.ಕೆ. ಮತ್ತು ಎಂ.ಎಲ್.ಎನ್. – ಮುದ್ರಣ 1887.
22. ಕನ್ನಡದ ಜಾವಳಿಗಳು : ಶ್ರೀಮಾನ್ ಕೆ.ವಿ. ಆಚಾರ್ಯ
23. ಹೊಸ ಕನ್ನಡದ ಅರುಣೋದಯ : ಶ್ರೀಮಾನ್ ಶ್ರೀನಿವಾಸ ಹಾವನೂರು.
24. ವೀಣಾ ಕಿರುಲೇಖನ : ಶ್ರೀಮಾನ್ ಆರ್.ಎನ್. ದೊರೆಸ್ವಾಮಿ.
25. ಗಂಡುಬೇರುಂಡ : ಕಿರುಲೇಖನ ಶ್ರೀಮಾನ್ ಹನುಮಂತರಾವ್
26. ನಯನಮನೋಹರ ನವರತ್ನಗಳು : ಶ್ರೀಮತಿ ಹೆಚ್. ಶ್ರೀಶೈಲ ಆರಾಧ್ಯ
27. ಕೆಲವು ಮಹಾಧಾನಗಳು : ಶ್ರೀಮಾನ್ ಎಂ. ಚಿದಾನಂದ ಮೂರ್ತಿ
28. ನೆನಪುಗಳು : ಶ್ರೀಮಾನ್ ಕೆ. ವಾಸುದೇವಚಾರ್ಯ
29. ಕನ್ನಡ ಅಧ್ಯಯನ ಸಂಸ್ಥೆಯವರಿಂದ ಪರಿಷ್ಕೃತವಾಗಿ ಪ್ರಕಟಿತವಾಗಿರುವ ಶಾಸನಗಳು. ಕನ್ನಡ ಅಧ್ಯಯನ ಸಂಸ್ಥೆ.
30. ಮುಮ್ಮಡಿ ಶ್ರೀಕೃಷ್ಣರಾಜ ಒಡೆಯರ್ ರವರ ಕಾಲದ ಸಂತಾನಕಮಕಲ್ಪವೆಂಬ

ವರ್ಣರಂಜಿತವಾದ ಭಾವಚಿತ್ರದ ವಿವರ, ಕಾಲ : 1870.

31. ಮುಮ್ಮಡಿ ಕೃಷ್ಣರಾಜ ಒಡೆಯರ್ ರವರ ಕಾಲದ ತಾಮ್ರಶಾಸನ, ಕಾಲ : ಮೇ 5, 1860.

32. ಕರ್ನಾಟಕ ಪತ್ರಾಗಾರ : ಮೈಸೂರು ಮತ್ತು ಬೆಂಗಳೂರಿನಲ್ಲಿರುವ ಮೈಸೂರು ಒಡೆಯರ್‌ರಿಗೆ ಸಂಬಂಧಿಸಿದ ಐತಿಹಾಸಿಕ ಕಡತಗಳು.

33. ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ : ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ 1979ರಲ್ಲಿ ಮುದ್ರಿಸಿ ಪ್ರಟಕವಾಗಿದೆ.

34. ಭರ್ತೃಹರಿಯ ಶತಕತ್ರಯ : ಶ್ರೀಮಾನ್ ಎನ್.ಕೆ. ನರಸಿಂಹಮೂರ್ತಿ ನಿವೃತ್ತ ಅಧ್ಯಾಪಕರು ಮೈಸೂರು ವಿಶ್ವವಿದ್ಯಾನಿಲಯ.

35. ಶ್ರೀ ಮನ್ಮಹಾರಾಜರವರ ವಂಶಾವಳಿ, ಭಾಗ–1, ಮೈಸೂರು 1916, ಪುಟ. 1–12.

36. ಕರ್ನಾಟಕ ಕವಿಚರಿತೆ, ಸಂ.2, 1975, ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಅಕ್ಟೋಬರ್ 1918.

37. ಮೈಸೂರು ಐಸಿರಿ–ಸಂ. ಡಾ. ವೈ.ಡಿ. ರಾಜಣ್ಣ, ಅಖಿಲ ಭರತ 83ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಸಂಪುಟ, 2017

* * * * *

# BIOGRAPHY


1. Southern Yadavas Dynasties and Mysore, an article - By Sri M.H. Krishna
2. Mysore gazetter, compiled and edited - By Sri C. hayavadhana Rao
3. The book in Idnai - A compilation by B.S. Keshavan- published by National book trust India.
4. Gallary of Historical portraits, catalogues with short Sketches of the Indians and europeans - preface by Sri Hayavadhana Rao
5. The blue book printed at London during August 1878 and other British records.
6. Lives of the Indian princess - by Charles Allen and Sharada Dwivedi
7. the Romance of playing cards - by Shri Shvapriyananda an article.
8. Mysore City - by C. Pearson published in 1930.
9. Annals and Antiquities of Rajasthan - by Lt. Col. James Tod

10. The views of origin and conduct of the war with the late Tippu Sultan - by Alexander Easton.
11. The place names of Mysore VJMS 6-4-1915, page, 255.
12. Antiquity & Mysore cultural profiles of Mysore city Anrhtological society of India - Calcutt, 1978
13. Mahishamandala Mysore State of JMS, 10-1-1919, page ,11-36.
14. Karnataka through the pages 1968, page 99-100.

* * * * *



Sri Mummadi krishnaraja Wadiyar



Chamudeshwari Temple



Agraharam



Arkavathi Dam




Chamarajeshwara Temple



LANSDOWNE_BUILDING




Lokapavani Dam



Sanskrit College Mysore



shivanasamudra Project



Shwethavaraha swamy



Thrineshwara Temple Mysorte




Veerabhadreshwara Swamy Temple

